# ಸಂರಚನಾವಾದ ಮತ್ತು ಶಿಕ್ಷಕರ ತರಗತಿ ಬೋಧನೆ

*– ಸಿ. ಎಸ್. ಶಿವಕುಮಾರ್*

## ಲೇಖನದ ಸಾರಾಂಶ

*ಇತ್ತೀಚಿನ ದಿನಗಳಲ್ಲಿ ಶಿಕ್ಷಣದ ಸಂದರ್ಭದಲ್ಲಿ ಬಹು ಚರ್ಚಿತ ವಿಷಯಗಳಲ್ಲಿ ಸಂರಚನಾವಾದವೂ ಒಂದು. ಇದರ ಮೂಲ ಆಶಯ ಮಕ್ಕಳಲ್ಲಿ ಹುದುಗಿರುವ ಪೂರ್ವಜ್ಞಾನವನ್ನು ಪರಿಗಣಿಸಿ ಅವರೇ ಜ್ಞಾನವನ್ನು ಕಟ್ಟಿಕೊಳ್ಳಲು ತರಗತಿ ಪ್ರಕ್ರಿಯೆಗಳು ಪೂರಕವಾಗಿರುವಂತೆ ಮಾಡುವುದು. ಶಿಕ್ಷಕರ ತಯಾರಿಗೆ ಸಂಬಂಧಿಸಿದ ಕೋರ್ಸ್‌ಗಳಾದ ಬಿ.ಎಡ್. ಡಿ.ಎಡ್. ತರಗತಿಗಳಲ್ಲಿ ವರ್ತನಾವಾದ, ಸಂರಚನಾವಾದ ಇನ್ನೂ ಅನೇಕ ಸಿದ್ಧಾಂತಗಳು ಚರ್ಚಿತವಾಗುತ್ತವೆ. ಆದಾಗ್ಯೂ ಶಿಕ್ಷಕರು ಇವೆಲ್ಲವುಗಳ ಕುರಿತು ಹೊಂದಿರುವ ಜ್ಞಾನ, ನಂಬಿಕೆಗಳಿಗೂ ಮತ್ತು ವಾಸ್ತವದಲ್ಲಿ ಕಂಡುಬರುವ ಅವರ ವೃತ್ತಿಪರ ಆಚರಣೆಗಳ ನಡುವೆಯೂ ಇರುವ ಅಂತರವನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಬಾಗಲಕೋಟೆಯ ಆಯ್ದ ಒಂದು ಕ್ಲಸ್ಟರ್‌ನ ಶಿಕ್ಷಕರ ಸಂದರ್ಶನ ಮತ್ತು ಅವರ ಮಾದರಿ ತರಗತಿ ವೀಕ್ಷಣೆಯ ಮೂಲಕ ಸಂರಚನಾವಾದವನ್ನು ಶಿಕ್ಷಕರ ತರಗತಿ ಬೋಧನೆಯಲ್ಲಿ ಅಳವಡಿಸಿಕೊಳ್ಳುವಲ್ಲಿ ಇರುವ ಸವಾಲುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.*

## ಪೀಠಿಕೆ

ಶಿಕ್ಷಣ ಎಂಬುದು ಶಾಲೆಯಂತಹ ಔಪಚಾರಿಕ ವ್ಯವಸ್ಥೆಗೆ ಬದ್ಧವಾಗಿರುವ ಪ್ರಸ್ತುತ ಸಂದರ್ಭದಲ್ಲಿ ಬೋಧನೆ, ಕಲಿಕೆಗಳೂ ಔಪಚಾರಿಕವಾಗುವುದು ಅನಿವಾರ್ಯ. ಅಂತಲೇ ಔಪಚಾರಿಕವಾಗಿ, ಒಂದು ಶಿಕ್ಷಣದ ಮಾದರಿಯನ್ನು ಕಾರ್ಯಾಚರಣೆಗೆ ತರುವಾಗ ಅದರ ವ್ಯಾಪಕ ಯಶಸ್ಸಿಗೆ ಉದಾರವಾದ ಆಶಯ, ಗೊತ್ತು–ಗುರಿಗಳನ್ನು ಗುರುತಿಸಿಕೊಳ್ಳುವುದೂ ಅಗತ್ಯವಾಗುತ್ತದೆ. ಈ ನಿಟ್ಟಿನಲ್ಲಿ ತಾತ್ತ್ವಿಕ ಚಿಂತನೆಗಳು ಶಿಕ್ಷಣದ ಆಶಯ–ಧ್ಯೇಯಗಳನ್ನು ಭದ್ರಪಡಿಸಿದರೆ, ಪ್ರಾಯೋಗಿಕ ಕ್ರಮಗಳು ಶಿಕ್ಷಣದ ಸಾರ್ಥಕತೆಗೆ ನೆರವಾಗುತ್ತವೆ. ಆದ್ದರಿಂದ ಶಿಕ್ಷಣದಂತಹ ಮಹತ್ಕಾರ್ಯಕ್ಕೆ ತತ್ತ್ವವೂ ಬೇಕು, ಪ್ರಯೋಗವೂ ಬೇಕು. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ, ತಾತ್ತ್ವಿಕ ಚಿಂತನೆಗಳು ಶಿಕ್ಷಣದ ಗುರಿ–ಧ್ಯೇಯಗಳನ್ನು ಒಳಗೊಂಡರೆ, ಪ್ರಾಯೋಗಿಕ ಆಚರಣೆಗಳು ಸಮಗ್ರ ಬೋಧನೆ–ಕಲಿಕಾ ಪ್ರಕ್ರಿಯೆಯನ್ನು ಒಳಗೊಳ್ಳುತ್ತವೆ. ಪಠ್ಯಕ್ರಮ–ಪಠ್ಯಪುಸ್ತಕ, ಪೂರಕ ಭೌತಿಕ ಸೌಲಭ್ಯ–ಯೋಜನೆಗಳು ಇವು ಮಧ್ಯವರ್ತಿಗಳಾಗುತ್ತವೆ.

ಶಿಕ್ಷಣ ಮತ್ತು ಶಿಕ್ಷಣದ ಸುಧಾರಣೆಯನ್ನು ಕುರಿತು ಎಲ್ಲಿಂದ

ಮಾತನ್ನಾರಂಭಿಸಿದರೂ, ತರಗತಿ ಕೋಣೆ ಮತ್ತು ಅಲ್ಲಿ ನಡೆಯುವ ಬೋಧನಾ–ಕಲಿಕಾ ಪ್ರಕ್ರಿಯೆಗಳೇ ನಿರ್ಣಾಯಕವಾಗುತ್ತವೆ. "ದೇಶದ ಭವಿಷ್ಯ ತರಗತಿಕೋಣೆಗಳಲ್ಲಿ ನಿರ್ಮಾಣವಾಗುತ್ತಿದೆ." ಎಂಬ ಕೊಠಾರಿ ಶಿಕ್ಷಣ ಆಯೋಗದ ಮಾತನ್ನು ಇಲ್ಲಿ ಸ್ಮರಿಸಬಹುದು. ಈ ಮಾತು ತರಗತಿ ಕೋಣೆಯ ಮತ್ತು ಅಲ್ಲಿ ನಡೆಯುವ ಬೋಧನಾ–ಕಲಿಕಾ ಪ್ರಕ್ರಿಯೆಯ ಮಹತ್ತ್ವವೇನೆಂಬುದನ್ನು ಸಾರುತ್ತದೆ. ಹಾಗೆ ನೋಡಿದರೆ, ಬೋಧನೆ–ಕಲಿಕೆ ಎಂಬುದು, ಶಿಕ್ಷಣದ ಒಟ್ಟು ಪ್ರಕ್ರಿಯೆಯಲ್ಲಿ ಕೇಂದ್ರ ಭಾಗವೂ ಹೌದು; ಶಿಕ್ಷಣ ಆಶಯದ ಕ್ರಿಯಾ ಭಾಗವೂ ಹೌದು. ಈ ಕೇಂದ್ರ ಭಾಗದಲ್ಲಿ ಬೋಧನೆ ಎಂಬುದು ಶಿಕ್ಷಣಶಾಸ್ತ್ರ, ಶಿಕ್ಷಣದ ಅನುಷ್ಠಾನಕ್ಕೆ ಬಹು ಹಿಂದಿನಿಂದಿಲೂ ನಂಬಿಕೊಂಡು ಬಂದಿರುವ ಮೂಲ ಮಾರ್ಗವಾಗಿದೆ. ವಾಸ್ತವವಾಗಿ ಶಿಕ್ಷಣದ ಕಾರ್ಯಾಚರಣೆ ಆರಂಭವಾಗುವುದೇ ಈ ಮಾರ್ಗದಿಂದ.

ಬೋಧನೆಯೊಂದಿಗೆ ಹೊಂದಿಕೊಂಡೇ ಸಾಗುವ 'ಕಲಿಕೆ'ಯು ವ್ಯಕ್ತಿ ಬದುಕಿನ ಸಹಜ ಕ್ರಿಯೆಯೇ ಆದರೂ ಅದು ಎಲ್ಲಿ, ಹೇಗೆ, ಯಾವಾಗ, ಯಾಕಾಗಿ ಸಂಭವಿಸುತ್ತದೆ? ಎಂಬುದು ಒಂದು ಸಂಕೀರ್ಣ ಚರ್ಚೆಯೇ ಸರಿ. ನಿರಂತರವೂ, ವ್ಯಕ್ತಿ ಆಧಾರಿತವೂ, ಅಪರಿಮಿತವೂ, ಅನನ್ಯವೂ, ಸಾಪೇಕ್ಷವೂ ಆದ ಕಲಿಕಾಪ್ರಕ್ರಿಯೆ ವಾಸ್ತವವಾಗಿ ಕ್ಷೇತ್ರಭೇದ, ವ್ಯಕ್ತಿಭೇದ, ವಯೋಭೇದಗಳಿಲ್ಲದೆ ಎಲ್ಲೆಡೆ ನಡೆಯುತ್ತದೆಯಾದರೂ ಶಿಕ್ಷಣ ಕ್ಷೇತ್ರದಲ್ಲಿ ಇದಕ್ಕೆ ವಿಶೇಷ ಮಹತ್ತ್ವವಿದೆ. ಆದ್ದರಿಂದಲೇ ಶಿಕ್ಷಣ ಕ್ಷೇತ್ರ ಕಲಿಕೆಯನ್ನು ವಿಶೇಷವಾಗಿ ವ್ಯಾಖ್ಯಾನಿಸುತ್ತದೆ – "ಕಲಿಕೆ ಎಂದರೆ, ವೈಯಕ್ತಿಕ ಮತ್ತು ಹೊರಜಗತ್ತಿನ ಅನುಭವಗಳು ಮತ್ತು ಪ್ರಭಾವಗಳು ಒಟ್ಟಾಗಿ ಒಬ್ಬ ವ್ಯಕ್ತಿಯ ಜ್ಞಾನ, ಕೌಶಲ, ಮೌಲ್ಯ, ಮನೋಭಾವ, ಧೋರಣೆ, ವರ್ತನೆ ಮತ್ತು ಲೋಕದೃಷ್ಟಿಗಳನ್ನು ಗಳಿಸುವುದಕ್ಕೆ, ಶ್ರೀಮಂತಗೊಳಿಸುವುದಕ್ಕೆ ಮತ್ತು ಪುನರ್ ರೂಪಿಸುವುದಕ್ಕೆ ನೆರವಾಗುವ ಒಂದು ಪ್ರಕ್ರಿಯೆ" (IMLD-ODD 2018 Wikidata India Edit-a-thon).

**ಅಧ್ಯಯನದ ಔಚಿತ್ಯ** : ಮನೋವಿಜ್ಞಾನದ ಆಧಾರದಲ್ಲಿ ರೂಪುಗೊಂಡ ಕಲಿಕಾ ಸಿದ್ಧಾಂತಗಳು ಮಗುವನ್ನೂ, ಅದರ ಭಾವನೆ, ಆಸಕ್ತಿ, ಕುತೂಹಲಗಳನ್ನೂ ಅರ್ಥಮಾಡಿಕೊಂಡು, ಅದಕ್ಕನುಣವಾಗಿ ಕಲಿಸುವ ಪ್ರಕ್ರಿಯೆಯನ್ನು ಕೈಗೊಳ್ಳಲು ಶಿಕ್ಷಕರಿಗೆ ನೆರವಾಗುತ್ತವೆ. ಈ ದೃಷ್ಟಿಯಲ್ಲಿ, ತರಗತಿಯಲ್ಲಿ ಬೋಧಿಸುವ ಪ್ರತಿಯೊಬ್ಬ ಶಿಕ್ಷಕನೂ ಕಲಿಕಾ ಸಿದ್ಧಾಂತಗಳ ಜ್ಞಾನವನ್ನು ಹೊಂದಿರುವುದು ಅಪೇಕ್ಷಣೀಯವೆನಿಸುತ್ತದೆ. ಇದನ್ನು ಅನುಲಕ್ಷಿಸಿಯೇ ಶಿಕ್ಷಕರ ಸೇವಾಪೂರ್ವ ತರಬೇತಿ ಪಠ್ಯಕ್ರಮದಲ್ಲಿ ಕಲಿಕಾ ಸಿದ್ಧಾಂತಗಳ ಪಠ್ಯವನ್ನು ಅಳವಡಿಸಲಾಗಿದೆ. ಕಾಲದಿಂದ ಕಾಲಕ್ಕೆ ಸುಧಾರಣೆಯಾಗುತ್ತಲೇ ಬಂದಿರುವ ಕಲಿಕಾ ಸಿದ್ಧಾಂತಗಳ ಪೈಕಿ ಸಂರಚನಾವಾದವು ತರಗತಿ ಸಂದರ್ಭದಲ್ಲಿ ಉಳಿದೆಲ್ಲ ಸಿದ್ಧಾಂತಗಳಿಗಿಂತ ಹೆಚ್ಚು ಸೂಕ್ತವಾದ ಮಾರ್ಗ ಎಂಬುದನ್ನು ಇತ್ತೀಚೆಗೆ ಕಂಡುಕೊಳ್ಳಲಾಗಿದೆ. ಅಲ್ಲದೆ ಬೋಧನೆ – ಕಲಿಕೆಗಳನ್ನು ಈ ಮಾರ್ಗದ ಮೂಲಕ ಸಾಧಿಸಲು ಆದ್ಯತೆಯನ್ನೂ ನೀಡಲಾಗುತ್ತಿದೆ. ಆದ್ದರಿಂದ ಪರಿಣಾಮಕಾರಿ ಬೋಧನೆ – ಕಲಿಕೆಯ ದೃಷ್ಟಿಯಿಂದ – ನಿಜವಾದ ತರಗತಿ ಸನ್ನಿವೇಶದಲ್ಲಿ ಸಂರಚನಾವಾದವು ಎಷ್ಟರಮಟ್ಟಿಗೆ ಆಚರಣೆಯಲ್ಲಿದೆ? ಎಂಬುದನ್ನು

ಗಮನಿಸುವುದು ಈ ಹೊತ್ತಿನ ಕಲಿಕಾ ಸಂದರ್ಭದ ಅಗತ್ಯಗಳಲ್ಲಿ ಒಂದಾಗಿದೆ.

ಸಂರಚನಾವಾದವು ತರಗತಿಯ ಕಲಿಕಾ ಸನ್ನಿವೇಶಕ್ಕೆ ಹಲವು ಫಲಕಾರಿ ಬೋಧನಾ ತಂತ್ರಗಳನ್ನು ಒದಗಿಸುತ್ತದೆ. ಒಂದು ಸಿದ್ಧಾಂತವಾಗಿ ಅದು ಜ್ಞಾನದ ಸಂರಚನೆಯ ಬಗ್ಗೆ ಹೆಚ್ಚು ಮಾತನಾಡಿದರೂ ಅದರ ಕೇಂದ್ರೀಯ ಕಳಕಳಿ ಇರುವುದು ಕಲಿಕಾ ಪ್ರಕ್ರಿಯೆಯಲ್ಲಿ, ಶಿಕ್ಷಕ ಮತ್ತು ಮಕ್ಕಳನ್ನು ಸಕ್ರಿಯವಾಗಿ ತೊಡಗಿಸುವುದರಲ್ಲಿ. 'ವಿದ್ಯಾರ್ಥಿ ಕೇಂದ್ರಿತ' ಶಿಕ್ಷಣ ಮತ್ತು ಬೋಧನೆಯನ್ನು ಪ್ರತಿಪಾದಿಸುವ ಎನ್.ಸಿ.ಎಫ್.–2005ರ ಆಶಯಗಳು ಕೂಡಾ ಕಲಿಕಾ ಪ್ರಕ್ರಿಯೆಯಲ್ಲಿ ಸಂರಚನಾವಾದವನ್ನು ಒಪ್ಪುತ್ತವೆ. ಹಾಗೆ ನೋಡಿದರೆ, ಪ್ರಸಕ್ತ ಶಿಕ್ಷಣದ ಸಂದರ್ಭದಲ್ಲಿ ಶಿಕ್ಷಕರು ಕಲಿಕಾ ಸಿದ್ಧಾಂತಗಳು ಮತ್ತು ಸಂರಚನಾವಾದದ ಬಗ್ಗೆ ಹೊಂದಿರುವ ತಿಳಿವಳಿಕೆಗಳೇನು? ಶಿಕ್ಷಕರ ತರಗತಿ ಪ್ರಕ್ರಿಯೆಯಲ್ಲಿ ಸಂರಚನಾವಾದದ ತತ್ತ್ವಗಳು ಎಷ್ಟರಮಟ್ಟಿಗೆ ಕಾಣಸಿಗುತ್ತವೆ? ಸಂರಚನಾವಾದಕ್ಕೆ ಅನುಗುಣವಾಗಿ ಬೋಧಿಸುವ ಅಥವಾ ಬೋಧಿಸದ ಶಿಕ್ಷಕರಿಗೆ ಇರುವ ಪ್ರಾಯೋಗಿಕ ಸವಾಲುಗಳು ಎಂಥವು? ಎಂಬ ಪ್ರಶ್ನೆಗಳನ್ನು ಇಟ್ಟುಕೊಂಡು, ಒಂದು ಪರಿಣಾಮಕಾರಿ ಬೋಧನಾ–ಕಲಿಕಾ ಮಾರ್ಗವಾಗಿ ಸಂರಚನಾವಾದದ ಪ್ರಯೋಗ ಸಾಧ್ಯತೆಗಳೆಷ್ಟು? ಮತ್ತು ಶಿಕ್ಷಕರಿಂದ ಅದರ ಬಳಕೆಯ ಪ್ರಮಾಣ ಯಾವ ಮಟ್ಟದಲ್ಲಿದೆ? ಎಂಬುದನ್ನು ಪರಿಶೀಲಿಸುತ್ತಾ ಒಂದು ಕಲಿಕಾ ಸಿದ್ಧಾಂತವಾಗಿ ಸಂರಚನಾವಾದವನ್ನು ಶಿಕ್ಷಕರ ಬೋಧನಾ ಆಚರಣೆಗಳೊಂದಿಗೆ ತುಲನೆ ಮಾಡಿ, ಅದನ್ನು ಮೌಲ್ಯೀಕರಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

**ಬೋಧನೆ–ಕಲಿಕೆ ಮತ್ತು ಕಲಿಕಾ ಸಿದ್ಧಾಂತಗಳು :** 'ಬೋಧನೆ–ಕಲಿಕೆಗಳೇ ತರಗತಿ ಕೋಣೆಯ ಜೀವಾಳ' ಎಂಬುದು ಸೂಕ್ತವಾದ ಮಾತು. ಇತ್ತೀಚೆಗೆ ಶಿಕ್ಷಣದಲ್ಲಿ ಸುಧಾರಣೆಗಳನ್ನು ತರಲಾಗುತ್ತಿದೆ ಅಥವಾ ತರಲು ಪ್ರಯತ್ನಿಸಲಾಗುತ್ತಿದೆ ಎಂದರೆ ಅಂತಹ ಬಹುತೇಕ ಪ್ರಯತ್ನಗಳು ಬೋಧನೆ–ಕಲಿಕಾ ಪ್ರಕ್ರಿಯೆಯ ಸುಧಾರಣೆಗಾಗಿಯೇ ನಡೆಯುತ್ತಿವೆ ಎಂದು ಧಾರಾಳವಾಗಿ ಭಾವಿಸಿಕೊಳ್ಳಬಹುದು. ಇಂತಹ ಪ್ರಯತ್ನಗಳಿಂದ ಬೋಧನೆ–ಕಲಿಕಾ ಪ್ರಕ್ರಿಯೆಗಳು ಫಲ ಪಡೆಯಬೇಕಾದರೆ, ಭೌತಿಕ ಕ್ರಮಗಳಿಗಿಂತ ಬೇರೆಯೇ ಆದ ಬೌದ್ಧಿಕ ಕ್ರಮಗಳೂ ಬೇಕಾಗುತ್ತವೆ. ಮತ್ತು ಈ ಬೌದ್ಧಿಕ ಕ್ರಮಗಳು ನೇರವಾಗಿ ಕಲಿಸುವವನಿಗೆ ಸಂಬಂಧಪಟ್ಟವಾಗುತ್ತವೆ. ಈ ನಿಟ್ಟಿನಲ್ಲಿ, ಕಲಿಕೆ–ಕಲಿಸುವಿಕೆಗೆ ಸಂಬಂಧಿಸಿದಂತೆ ರೂಪುಗೊಂಡಿರುವ ಕಲಿಕಾ ಸಿದ್ಧಾಂತಗಳು ಕಲಿಕೆಯನ್ನು ಉದ್ದೇಶಿಸಿ ನಡೆಯುವ ಬೋಧನೆಗೂ, ಬೋಧನೆಯನ್ನು ನಿರೀಕ್ಷಿಸಿ ನಡೆಯುವ ಕಲಿಕೆಗೂ ತಂತ್ರ–ದಿಕ್ಸೂಚಿಗಳಾಗಿ ಕಲಿಸುವವನಿಗೆ ನೆರವಾಗುತ್ತವೆ.

ತತ್ತ್ವಶಾಸ್ತ್ರ, ಶಿಕ್ಷಣಶಾಸ್ತ್ರ, ಸಮಾಜಶಾಸ್ತ್ರ, ಮನೋವಿಜ್ಞಾನ ಮತ್ತು ಪ್ರಯೋಗ–ಫಲಿತಗಳ ಸಂಯೋಗದಿಂದ ರೂಪುಗೊಂಡ ಕಲಿಕಾ ಸಿದ್ಧಾಂತಗಳು 20ನೇ ಶತಮಾನದಿಂದ ಈಚೆಗೆ ಹುಟ್ಟಿದಂಥವು. ಆ ಸಿದ್ಧಾಂತಗಳನ್ನು ಮೂರು ಪ್ರಕಾರಗಳಲ್ಲಿ ನೋಡಬಹುದು.

1. **ಸಾಂಪ್ರದಾಯಿಕ ಕಲಿಕಾ ಸಿದ್ಧಾಂತಗಳು ಅಥವಾ ಕಲಿಕಾ ವಾದಗಳು** – ಇವುಗಳಲ್ಲಿ ವರ್ತನಾವಾದ, ಜ್ಞಾನಾತ್ಮಕವಾದ, ಸಂರಚನಾವಾದ – ಸಾಮಾಜಿಕ ಸಂರಚನಾವಾದ

ಹಾಗೂ ಮಾನವಿಕ ಕಲಿಕಾವಾದಗಳು ಮುಖ್ಯವಾದವು. 20ನೇ ಶತಮಾನದ ಆರಂಭದ ಮನೋವಿಜ್ಞಾನಿಗಳು ಈ ವಾದಗಳನ್ನು ಮುಂದಿಡುತ್ತಾರೆ. ಇಲ್ಲಿ ಪ್ರತಿಯೊಂದು ವಾದವೂ ಹಲವು ಕಲಿಕಾ ಸಿದ್ಧಾಂತಗಳ ಮೊತ್ತವಾಗಿದೆ.

2. **ಇತರೆ ಕಲಿಕಾ ಸಿದ್ಧಾಂತಗಳು** – ಇವು ಸಾಂಪ್ರದಾಯಿಕ ಕಲಿಕಾ ವಾದಗಳಿಂದ ಹೊರತಾದ ಆದರೆ ಅಲ್ಪಮಟ್ಟಿಗೆ ಅವುಗಳ ಪ್ರಭಾವವನ್ನೂ ಉಳಿಸಿಕೊಂಡ ಪ್ರತ್ಯೇಕ ಕಲಿಕಾ ಸಿದ್ಧಾಂತಗಳಾಗಿವೆ. ಅಂದರೆ ಇಲ್ಲಿನ ಪ್ರತಿಯೊಂದು ಸಿದ್ಧಾಂತವೂ ಕಲಿಕೆಯನ್ನು ಸಾಂಪ್ರದಾಯಿಕ ನೆಲೆಯಿಂದ ಪ್ರತ್ಯೇಕವಾಗಿಯೇ ವ್ಯಾಖ್ಯಾನಿಸುತ್ತದೆ. ಈ ಸಿದ್ಧಾಂತಗಳು 20ನೇ ಶತಮಾನದ ಕೊನೆಯಲ್ಲಿ ಹುಟ್ಟಿಕೊಂಡಂಥವು. ಅನುಭವಾತ್ಮಕ ಕಲಿಕೆ, ಬಹುಮುಖ ಬುದ್ಧಿಶಕ್ತಿ, ಸನ್ನಿವೇಶ/ಸಂದರ್ಭ ಆಧಾರಿತ ಕಲಿಕೆ ಮತ್ತು ಅಭ್ಯಾಸಿಗ ಸಮುದಾಯ, ಮಗುವಿನ ಅಭಿವೃದ್ಧಿ ಸಿದ್ಧಾಂತ, ಗುರುತಿನ ಸಿದ್ಧಾಂತ – ಇವು ಈ ಪ್ರಕಾರದ ಮುಖ್ಯ ಸಿದ್ಧಾಂತಗಳು.
3. **21ನೇ ಶತಮಾನದ ಕಲಿಕೆ ಮತ್ತು ಕೌಶಲಗಳು** – ಇವು ಸಾಂಪ್ರದಾಯಿಕ ಮತ್ತು ಇತರೆ ಕಲಿಕಾ ಸಿದ್ಧಾಂತಗಳ ಸುಧಾರಿತ ಮಾದರಿಗಳಾಗಿವೆ. ಇವನ್ನು ಸಿದ್ಧಾಂತ ಎಂಬುದಕ್ಕಿಂತ ಪ್ರತ್ಯೇಕ ಕಲಿಕಾ ಮಾದರಿಗಳು ಎಂತಲೇ ಕರೆಯಬಹುದು. ಇತ್ತೀಚೆಗೆ ಮಾರ್ಗದರ್ಶಿ, ವಿಮರ್ಶಾತ್ಮಕ ಮತ್ತು ಉಪಕರಣಾತ್ಮಕ ಕಲಿಕೆ, ಮಾಧ್ಯಮ ಮತ್ತು ತಂತ್ರಜ್ಞಾನ ಆಧಾರಿತ ಕಲಿಕೆ, ಮಾನಸಿಕ ಕಲಿಕಾ ಮಾದರಿ ಮುಂತಾದವು ಕಲಿಕಾ ಕ್ಷೇತ್ರದಲ್ಲಿ ಕಾಣಸಿಗುತ್ತವೆ.

## ಸಂರಚನಾವಾದ

ಸಂರಚನಾವಾದದ ಇತಿಹಾಸವನ್ನು ಕೆದಕಿ ನೋಡಿದರೆ ಕ್ರಿ.ಪೂ. 5ನೇ ಶತಮಾನದಲ್ಲಿದ್ದ ಗೌತಮ ಬುದ್ಧನಿಂದಲೇ ಅದು ಕಾಣಸಿಗುತ್ತದೆ. ಕ್ರಿ.ಶ. 6ನೇ ಶತಮಾನದಲ್ಲಿದ್ದ ಲಾವೋತ್ಸೆ ಮತ್ತಿತರರ ಚಿಂತನೆಗಳಲ್ಲೂ ಸಂರಚನಾವಾದದ ಕುರುಹುಗಳನ್ನು ಗುರುತಿಸಬಹುದು. ಇಂತಹ ಸಂರಚನಾವಾದವು ಶಿಕ್ಷಣದಲ್ಲಿ ತನ್ನ ವಿಸ್ತಾರವನ್ನು ಪಡೆದುಕೊಂಡದ್ದು ಮರಿಯಾ ಮಾಂಟೆಸ್ಸಾರಿ, ಜೀನ್ ಪಿಯಾಜೆ, ವೈಗಾಟ್‌ಸ್ಕಿ, ನೋಮ್ ಚೋಮ್‌ಸ್ಕಿ, ಬ್ರೂನರ್, ಬ್ರಾನ್‌ಫೋರ್ಡ್, ವೈಕೋ, ಗ್ರಾಂಬಿಗರ್ ಮುಂತಾದವರ ಚಿಂತನೆಗಳಿಂದ. ಆಧುನಿಕ ಸಂರಚನಾವಾದದ ಹೊಳಹು ಸಿಗುವುದು ಜಾನ್ ಡ್ಯೂಯಿ ಅವರ ವಿಚಾರಧಾರೆಗಳಲ್ಲಾದರೂ, ಸಂರಚನಾವಾದಕ್ಕೆ ಸಾಮಾಜಿಕ ಆಯಾಮ ದೊರೆಯುವುದು ವೈಗಾಟ್‌ಸ್ಕಿ ಅವರ ವಿಚಾರಗಳಿಂದ.

ಸಂರಚನಾವಾದದ ಪರಿಕಲ್ಪನೆಯು ವ್ಯಾಪಕವಾಗಿದ್ದು, ಅದು ಸಮಾಜಶಾಸ್ತ್ರ, ಮನೋವಿಜ್ಞಾನ, ಶಿಕ್ಷಣ, ಇತಿಹಾಸ, ವಿಜ್ಞಾನ ಮುಂತಾದ ಜ್ಞಾನ ಶಾಖೆಗಳ ಮೇಲೆ ಪ್ರಭಾವ ಬೀರಿದ ಸಿದ್ಧಾಂತವಾಗಿದೆ. 'ವ್ಯಕ್ತಿಯು ಪ್ರಪಂಚದೊಂದಿಗೆ ತಾನು ನಡೆಸುವ ನಿರಂತರ ಕ್ರಿಯೆಗಳ ಮೂಲಕ ಪಡೆಯುವ ಅನುಭವ ಮತ್ತು ಗ್ರಹಿಕೆಗಳ ಆಧಾರದ ಮೇಲೆ ತನ್ನದೇ ಆದ ಮಿತಿ ಮತ್ತು ಮಾನಸಿಕ ಮಾದರಿಯಲ್ಲಿ ತನ್ನದೇ ಆದ ಜ್ಞಾನವನ್ನು ಕಟ್ಟಿಕೊಳ್ಳುತ್ತಾನೆ' ಎಂಬ ಪ್ರತಿಪಾದನೆಯೇ ಸಂರಚನಾವಾದ.

ಸಂರಚನಾವಾದವು ಬಾಹ್ಯ ಜ್ಞಾನವನ್ನು ವ್ಯಕ್ತಿಯ ಆಂತರಿಕ/ವೈಯಕ್ತಿಕ ಜ್ಞಾನದೊಂದಿಗೆ ಸಂಯೋಜಿಸಿ ಜ್ಞಾನವನ್ನು ನಿರ್ಮಿಸುವ, ವಿಸ್ತರಿಸುವ ಮತ್ತು ಅರ್ಥೈಸುವ ಚಿಕಿತ್ಸಕ ವಿಧಾನವೂ ಆಗಿದೆ. ಸಂರಚನಾವಾದವು ಜ್ಞಾನದ ಬಗೆಗಿನ ತಾತ್ತ್ವಿಕ ದೃಷ್ಟಿಕೋನವಾಗಿದ್ದು ಅದು ಜ್ಞಾನದ ಸ್ವಭಾವವನ್ನು ಮತ್ತು ವ್ಯಕ್ತಿ ಹೇಗೆ ಕಲಿಯುತ್ತಾನೆ ಎಂಬುದನ್ನು ವಿವರಿಸುತ್ತದೆ. ಅದು ಕಲಿಕೆಯ ಯಾವುದೋ ಒಂದು ನಿರ್ದಿಷ್ಟ ವಿಧಾನವನ್ನು ಕುರಿತು ಮಾತನಾಡುವುದಿಲ್ಲ. ಬದಲಿಗೆ ಕಲಿಕೆಯ ಒಟ್ಟು ಪ್ರಕ್ರಿಯೆಯನ್ನು ಕುರಿತು ಮಾತನಾಡುತ್ತದೆ. 'ಮನುಷ್ಯರು ಏನನ್ನು ಮಾಡುತ್ತಾರೋ ಅದನ್ನು ಮಾತ್ರ ಅವರು ತಿಳಿಯಬಲ್ಲರು' ಎಂಬ ಗಿಯಾಂಬಟ್ಟಿಸ್ಟ ವೈಕೋ ಅವರ ಮಾತು ಹಾಗೂ 'ಮನುಷ್ಯರು ಯಾವುದನ್ನು ತಮ್ಮದೇ ವಿನ್ಯಾಸಕ್ಕೆ ಅನುಗುಣವಾಗಿ ಸ್ವತಃ ತಾವೇ ಮಾಡುತ್ತಾರೋ ಅದನ್ನು ಮಾತ್ರ ಅವರ ಮನಸ್ಸು ಗ್ರಹಿಸಬಲ್ಲದು' ಎಂಬ ಇಮ್ಯಾನ್ಯುಯಲ್ ಕ್ಯಾಂಟ್ ಅವರ ಮಾತು ಸಂರಚನಾವಾದಕ್ಕೆ ಪೀಠಿಕೆಗಳಾಗಿವೆ.

## ಸಂರಚನಾವಾದ ಮತ್ತು ಕಲಿಕೆ

ಸಂರಚನಾವಾದವು ವರ್ತನಾವಾದ ಮತ್ತು ನಿರ್ದೇಶಿತ ಬೋಧನೆಗಳಂತಹ ಉಪದೇಶಾತ್ಮಕ ಕಲಿಕಾ ಪ್ರಕ್ರಿಯೆಗಳಿಗೆ ಪ್ರತಿಭಟನೆಯ ರೂಪದಲ್ಲಿ ಮೂಡಿಬಂದ ಶೈಕ್ಷಣಿಕ ನೆಲೆಯಾಗಿದೆ. ವರ್ತನಾವಾದಿಗಳ ವಿಧಾನಕ್ಕೆ ಬದಲಾಗಿ ಕಲಿಕೆಯಲ್ಲಿ ಜ್ಞಾನ ಕಟ್ಟಿಕೊಳ್ಳುವ ವಿಧಾನವನ್ನು ಅನುಸರಿಸಬೇಕೆಂದು ಸಂರಚನಾವಾದವು ಹೇಳುತ್ತದೆ. 'ಕಲಿಯುವುದಕ್ಕಾಗಿ ಬೋಧಿಸು ಎಂಬುದಕ್ಕಿಂತ ತಿಳಿದುಕೊಳ್ಳುವುದಕ್ಕೆ ಅನುಕೂಲ ಕಲ್ಪಿಸು' ಎಂಬುದು ಸಂರಚನಾವಾದದ ನಿಲುವು. ಅಲ್ಲದೆ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು-2005 ಕೂಡಾ ಬೋಧನೆಯಲ್ಲಿ ಈಗಿರುವ ವರ್ತನಾವಾದದ ನಿಲುವಿಗೆ ಬದಲಾಗಿ ಸಂರಚನಾವಾದ ವಿಧಾನದ ಕಲಿಕೆಗೆ ಆದ್ಯತೆ ನೀಡಿದೆ. ಸಂರಚನಾವಾದದ ಪ್ರಕಾರ 'ಜ್ಞಾನ' ಎಂಬುದು ಇನ್ನೊಬ್ಬರಿಂದ ಸ್ವೀಕರಿಸಿ ಪಡೆಯುವಂಥದ್ದಲ್ಲ; ಜ್ಞಾನ ಎಂಬುದು ಸಾಂದರ್ಭಿಕ ಪ್ರಕ್ರಿಯೆಗಳಿಂದ ಒಡಮೂಡುವ ಸೃಜನಾತ್ಮಕವೂ, ವ್ಯಕ್ತಿಗತವೂ ಆದ ಕ್ರಿಯಾಶೀಲ ಪ್ರಕ್ರಿಯೆ. ಸಂರಚನಾವಾದವು ಜ್ಞಾನ ಎಂಬುದು ಆರ್ಜನೆಯಾಗಬೇಕು ಎಂಬುದಕ್ಕಿಂತ ರಚನೆಯಾಗಬೇಕು ಎಂದು ಪ್ರತಿಪಾದಿಸುತ್ತದೆ. ಅಂದರೆ ಒಬ್ಬ ಕಲಿಕಾರ್ಥಿ ಮಾಡಬೇಕಾದುದು ಜ್ಞಾನ ರಚನೆಯೇ ಹೊರತು ಜ್ಞಾನಾರ್ಜನೆಯಲ್ಲ ಎಂಬುದು ಇದರ ಮುಖ್ಯ ತಿರುಳು. ಈ ನಿಟ್ಟಿನಲ್ಲಿ ಸಂರಚನಾವಾದವು ಜ್ಞಾನ ರಚನೆಯಾಗಬೇಕಾದರೆ ಮೂರು ಆಧಾರಗಳು ಬೇಕೆನ್ನುತ್ತದೆ. ಅವುಗಳೆಂದರೆ:

ಅ. ಕಲಿಕಾರ್ಥಿಯ ಪೂರ್ವಜ್ಞಾನ / ಪೂರ್ವಾನುಭವ

ಆ. ಸದ್ಯದ ವಾಸ್ತವಿಕ / ಹೊಸ ಜ್ಞಾನ

ಇ. ಪರಿಸರವನ್ನು ಕುರಿತು ಕಲಿಕಾರ್ಥಿಗೆ ಇರುವ ಪ್ರಕಲ್ಪನೆಗಳು / ಊಹೆಗಳು

ಈ ಮೂರೂ ಪರಸ್ಪರ ಸಂಯೋಗಗೊಂಡಾಗ ಕಲಿಕಾ ಪ್ರಕ್ರಿಯೆ ಉತ್ತಮವಾಗಬಲ್ಲದು ಎಂಬುದು ಸಂರಚನಾವಾದದ ಸಲಹೆ. ಈ ನಿಟ್ಟಿನಲ್ಲಿ ಅದು ತರಗತಿಯಲ್ಲಿ ಶಿಕ್ಷಕನು ಬೋಧಕನಿಂದ ಸುಗಮಗಾರನಾಗಿ ಬದಲಾಗಬೇಕಾದ ಅಗತ್ಯತೆಯನ್ನು ಪ್ರತಿಪಾದಿಸುತ್ತದೆ.

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು –2005 ಕೂಡ ಸುಗಮಗಾರಿಕೆಗೆ ಮಾನ್ಯತೆ ನೀಡಿದೆ. ಶಿಕ್ಷಕರು ವಿದ್ಯಾರ್ಥಿಗಳಿಗೆ ಕೇವಲ ಗಿಣಿಪಾಠಕ್ಕೆ ಆದ್ಯತೆ ಕೊಡದೆ, ಯಾಂತ್ರಿಕವಾಗಿ ನೆನಪಿಟ್ಟುಕೊಳ್ಳುವ ಪ್ರಕ್ರಿಯೆಯನ್ನು ಕೈಬಿಟ್ಟು ಅವರದೇ ಪೂರ್ವಜ್ಞಾನದ ಆಧಾರದ ಮೇಲೆ ಹೊಸ ಜ್ಞಾನವನ್ನು ಕಟ್ಟಿಕೊಳ್ಳಲು ಅವಕಾಶ ನೀಡಬೇಕು. 'ಯಾವುದೇ ಮಗುವು ತರಗತಿಗೆ ಬರುವಾಗ ಖಾಲಿ ಕೊಡ ಆಗಿರುವುದಿಲ್ಲ; ಅವನು ತನ್ನದೇ ಆದ ಪೂರ್ವಜ್ಞಾನ, ಅನುಭವ, ಕಲ್ಪನೆ, ಗ್ರಹಿಕೆ, ಮಿಥ್ಯೆಗಳನ್ನು ಇಟ್ಟುಕೊಂಡೇ ಬಂದಿರುತ್ತಾನೆ. ಮಗುವಿನ ಇಂತಹ ಜ್ಞಾನವು ಶಿಕ್ಷಕರು ಬೋಧಿಸುವ ಪಠ್ಯಕ್ರಮದಲ್ಲಿ ಇರಲೇಬೇಕೆಂದಿಲ್ಲ ಮತ್ತು ಶಿಕ್ಷಕರು ಬೋಧಿಸುತ್ತಿರುವ ವಿಷಯಕ್ಕೂ ಅದಕ್ಕೂ ಸಂಬಂಧವಿರಲೇಬೇಕೆಂದಿಲ್ಲ. ಹಾಗೆಂದ ಮಾತ್ರಕ್ಕೆ ಶಿಕ್ಷಕರು ವಿದ್ಯಾರ್ಥಿಯ 'ಜ್ಞಾನ'ವನ್ನು ತಪ್ಪು ಎಂದೂ ಭಾವಿಸುವಂತಿಲ್ಲ' ಎಂಬುದು ಸಂರಚನಾವಾದದ ಮುಖ್ಯ ಸೂಚನೆ.

## ಸಂರಚನಾವಾದ ಮತ್ತು ಬೋಧನೆ

ಸಂರಚನಾವಾದದ ಬೇರು ಜ್ಞಾನಾತ್ಮಕ ಮನೋವಿಜ್ಞಾನದಲ್ಲಿದೆ. ಅದು ಕಲಿಕೆ ಮತ್ತು ಜ್ಞಾನ ಸಿದ್ಧಾಂತಗಳನ್ನು ಕುರಿತು ವಿವರಣಾತ್ಮಕ ವಾದವನ್ನು ಮಂಡಿಸುತ್ತದೆ. ಸಂರಚನಾವಾದವು ಜ್ಞಾನಾತ್ಮಕವಾದಂತೆ ಕಲಿಕೆಯ ಅಂಗವಾಗಿ ಜ್ಞಾನರಚನೆಯನ್ನೇ ಪ್ರತಿಪಾದಿಸಿದರೂ, ಅದು ಕಲಿಯುವವರು ಮತ್ತು ಕಲಿಸುವವರ ನಡುವಿನ ಕಲಿಕಾ ಪ್ರಕ್ರಿಯೆಯು ದ್ವಿಮುಖ–ಸಕ್ರಿಯ ಪ್ರಕ್ರಿಯೆಯಾಗಬೇಕು ಎನ್ನುತ್ತದೆ. ಆ ಮೂಲಕ ಅದು ಜ್ಞಾನದ ರಚನೆಯು 'ಸಂರಚನೆ'ಯ ಮಾದರಿಯಲ್ಲಿ ನಡೆಯುವುದನ್ನು ಮಾನ್ಯೀಕರಿಸುತ್ತದೆ. ಹೀಗೆ ಕಲಿಕೆಯನ್ನು, ಜ್ಞಾನರಚನೆಯನ್ನು ದ್ವಿಮುಖ ಪ್ರಕ್ರಿಯೆಯಾಗಿ ನೋಡುವ ಸಂರಚನಾವಾದವು ತರಗತಿ ಸನ್ನಿವೇಶದಲ್ಲಿ ಕಲಿಕಾರ್ಥಿಯ ತಾಟಸ್ಥ್ಯವನ್ನು ನಿರಾಕರಿಸಿ, ಬೋಧನೆ–ಕಲಿಕೆಯ ಯಶಸ್ಸಿಗೆ ಕೆಲವು ನಿರ್ದಿಷ್ಟ ಬೋಧನಾ ತಂತ್ರಗಳನ್ನು ಪ್ರತಿಪಾದಿಸುತ್ತದೆ. ಸಂವಾದ, ಚರ್ಚೆ, ಯೋಜನಾ ಕಾರ್ಯ, ಪ್ರಶ್ನೆಗಳ ಬಗ್ಗೆ ಚರ್ಚೆ, ಒಂದು ವಿಷಯ/ಘಟನೆಯನ್ನು ಹಲವು ದೃಷ್ಟಿಕೋನಗಳಿಂದ ಪರಿಶೀಲಿಸುವ ಮನೋಭಾವ, ಚಟುವಟಿಕೆ ಆಧಾರಿತ ಕಲಿಕೆ, ಸಹಭಾಗಿ ಕಲಿಕೆ, ಆತ್ಮಾವಲೋಕನ ತಂತ್ರಗಳು, ವಿಶ್ಲೇಷಣೆ, ಅನ್ವಯಿಸುವಿಕೆ, ವಿಚಾರ ವಿನಿಮಯ ಇವೇ ಮೊದಲಾದ ವಿಧಾನಗಳನ್ನು ಬೋಧನಾ ತಂತ್ರದಲ್ಲಿ ಅಳವಡಿಸಿಕೊಳ್ಳಲು ಸಂರಚನಾವಾದವು ಒತ್ತಾಯಿಸುತ್ತದೆ.

ಈ ವಾದವು ಶಿಕ್ಷಕ–ಕೇಂದ್ರಿತ ಕಲಿಕಾ ವಿನ್ಯಾಸಗಳ ಬದಲಿಗೆ, ವಿದ್ಯಾರ್ಥಿಗೆ ಕಲಿಕಾ ಸ್ವಾತಂತ್ರ್ಯವನ್ನು ಒದಗಿಸುತ್ತದೆ. ಅಲ್ಲದೆ, 'ಶಿಕ್ಷಕರು ಕಲಿಕೆಯಲ್ಲಿ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆ ನಡೆಸುವ ಬದಲಿಗೆ ಕಲಿಕೆಯನ್ನು ಅನುಕೂಲಿಸುವ ಸುಗಮಗಾರರಾಗಿ, ಸಂಘಟನಾಕಾರರಾಗಿ ಪಾತ್ರ ನಿರ್ವಹಿಸಬೇಕು' ಎಂದು ಬಯಸುತ್ತದೆ. ಶಾಲೆಯ ನಾಲ್ಕು ಗೋಡೆಯಲ್ಲಷ್ಟೇ ಕಲಿಕೆ ಎಂಬುದರ ಬದಲಾಗಿ ಹೊಸ–ಹೊಸ ಸನ್ನಿವೇಶದಲ್ಲಿ ಕಲಿಸುವುದಕ್ಕೆ/ಕಲಿಯುವುದಕ್ಕೆ ಸಂರಚನಾವಾದವು ಒತ್ತು ನೀಡುತ್ತದೆ. ಒಟ್ಟಿನಲ್ಲಿ ಬೋಧನಾ–ಕಲಿಕಾ ಪ್ರಕ್ರಿಯೆಗೆ ಸಂರಚನಾವಾದವು ನೀಡುವ ಸಲಹೆಗಳನ್ನು ಕೆಳಕಂಡಂತೆ ಸಂಗ್ರಹಿಸಬಹುದು.

- ಜ್ಞಾನ ಎಂಬುದು ತರಗತಿ ವಾತಾವರಣದಲ್ಲಿ ತಟಸ್ಥವಾಗಿ ಕುಳಿತು ಸ್ವೀಕರಿಸುವಂಥದ್ದಲ್ಲ. ಬದಲಿಗೆ ಅದು ಶಿಕ್ಷಕ–ವಿದ್ಯಾರ್ಥಿಗಳ ಪರಸ್ಪರ ಸಕ್ರಿಯ ಭಾಗವಹಿಸುವಿಕೆಯ ಮೂಲಕ ನಡೆಯುವಂಥದ್ದು. ಇಲ್ಲಿ ಶಿಕ್ಷಕರು ಕಲಿಸುವುದಕ್ಕಿಂತ ಕಲಿಯುವ ವಾತಾವರಣವನ್ನು ಸೃಷ್ಟಿಸುವುದೇ ಮುಖ್ಯ.
- ಪದಗಳ ಒಳಗೆ ಅರ್ಥಗಳನ್ನು 'ಪ್ಯಾಕ್' ಮಾಡಿ ಅದನ್ನು ಮಕ್ಕಳಿಗೆ ವರ್ಗಾವಣೆ ಮಾಡಿ ಅದನ್ನು ಮನದಟ್ಟು ಮಾಡಿಸುತ್ತೇವೆ ಎಂದು ಶಿಕ್ಷಕರು ಭಾವಿಸಿದರೆ ಅದು ತಪ್ಪು. ಆದ್ದರಿಂದ ಶಿಕ್ಷಕರು, ಮಗು ಹೊಂದಿರುವ ಪೂರ್ವಜ್ಞಾನವನ್ನು ಪರಿಗಣಿಸಿ ತಾನು ಬೋಧಿಸುವ ವಿಷಯ ಮಗುವಿನ ಸ್ವಂತ ಜ್ಞಾನವಾಗುವಂತೆ ತರಗತಿಯನ್ನು ಆಯೋಜಿಸಬೇಕಾಗುತ್ತದೆ ಮತ್ತು ಈ ನಿಟ್ಟಿನಲ್ಲಿ ಮಗುವನ್ನು ತೊಡಗಿಸಿಕೊಳ್ಳುವಂತಹ ಸೂಕ್ತ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ.
- 'ಶಿಕ್ಷಕರಿಗೆ ಎಲ್ಲವೂ ತಿಳಿದಿದೆ, ಮಕ್ಕಳಿಗೆ ಏನೂ ತಿಳಿದಿಲ್ಲ' ಎಂಬುದನ್ನು ಹಾಗೂ 'ಶಿಕ್ಷಕರು ಹೇಳಿದ್ದೆಲ್ಲವನ್ನೂ ಮಕ್ಕಳು ಕಲಿಯುತ್ತಾರೆ ಅಥವಾ ಸ್ವೀಕರಿಸುತ್ತಾರೆ' ಎಂಬುದನ್ನು ಸಂರಚನಾವಾದವು ನಿರಾಕರಿಸುತ್ತದೆ.
- ಶಾಲೆ ಮತ್ತು ಶಿಕ್ಷಕರು ನೀಡುವ ಅನುಭವ–ಕಲಿಕೆಗಳು ಮಕ್ಕಳ ಪೂರ್ವಜ್ಞಾನ ಗಳೊಡನೆ ಮಿಳಿತಗೊಂಡು ಅರಿವನ್ನು ಪರೀಕ್ಷಿಸಿಕೊಳ್ಳುವ ಕ್ರಿಯೆಯೇ ನಿಜವಾದ 'ಜ್ಞಾನವನ್ನು ಕಟ್ಟಿಕೊಳ್ಳುವಿಕೆ' ಎಂದು ಸಂರಚನಾವಾದ ಭಾವಿಸುತ್ತದೆ.
- ಸಂರಚನಾವಾದದಂತೆ ಬೋಧನೆ–ಕಲಿಕೆ ಸಾಗಬೇಕಾದರೆ, ಶಿಕ್ಷಕರು ತಮ್ಮ ತರಗತಿಗಳಲ್ಲಿ ಸಂವಾದ, ಅನ್ವೇಷಣೆ, ಪ್ರಶ್ನಿಸುವಿಕೆ, ವಿಶ್ಲೇಷಣೆ, ಚರ್ಚೆ, ಅನ್ವಯಿಸುವಿಕೆ, ಪ್ರಶಂಸೆ ಮುಂತಾದ ಅನುಭವಾತ್ಮಕ ಚಟುವಟಿಕೆಗಳನ್ನು ವಿದ್ಯಾರ್ಥಿಗಳಿಗೆ ಒದಗಿಸಬೇಕು ಎಂಬುದು ಈ ವಾದದ ಪ್ರತಿಪಾದನೆ.

## ಸಂರಚನಾವಾದ ಮತ್ತು ಶಿಕ್ಷಕರ ಪ್ರಸಕ್ತ ಬೋಧನಾ ಆಚರಣೆಗಳು

ಸಂರಚನಾವಾದವು 'ಜ್ಞಾನದ ಸ್ವರೂಪವನ್ನು ಮತ್ತು ವ್ಯಕ್ತಿಯು ಯಾವ ರೀತಿಯಲ್ಲಿ ಕಲಿಯುತ್ತಾನೆ' ಎಂಬುದನ್ನು ವಿವರಿಸುವ ಒಂದು ಅರ್ಥಪರಿಕಲ್ಪನಾ ವಿಧಾನವೂ ಹೌದು. ಜ್ಞಾನ ರಚನೆಯ ಪ್ರಕ್ರಿಯೆಯಲ್ಲಿ ಅದು ಸಾಮಾಜಿಕ ಸಂಧಾನ ಅಥವಾ ಸಾಮಾಜಿಕ ಕೊಡು–ಕೊಳ್ಳುವಿಕೆಯನ್ನು ಅಗತ್ಯವಾಗಿ ಪರಿಗಣಿಸುತ್ತದೆ. 'ಜ್ಞಾನರಚನೆ' ಎಂಬುದು ಪ್ರತಿಯೊಬ್ಬರಲ್ಲಿಯೂ ತನ್ನದೇ ಆದ ಶೈಲಿ, ಗತಿ, ಮಿತಿಗಳಿಗೆ ಅನುಗುಣವಾಗಿಯೇ ನಡೆಯುತ್ತದೆ. ರಿಚರ್ಡ್‌ಸನ್ ಹೇಳುವಂತೆ, 'ವ್ಯಕ್ತಿಗಳು ತಾವು ಈಗಾಗಲೇ ತಿಳಿದಿರುವ, ನಂಬಿರುವ, ತಮ್ಮ ಸಂಪರ್ಕಕ್ಕೆ ಬರುವ ವಿಚಾರಗಳು, ಘಟನೆಗಳು ಹಾಗೂ ಚಟುವಟಿಕೆಗಳಿಂದ ನಡೆಸುವ ಪರಸ್ಪರ ಪ್ರಕ್ರಿಯೆಯಿಂದ ತಮ್ಮದೇ ಆದ ಹೊಸ ಅರಿವನ್ನು ಮತ್ತು ಜ್ಞಾನವನ್ನು ಸೃಷ್ಟಿಸಿಕೊಳ್ಳುತ್ತಾರೆ.' ಇಂತಹ ಮಾತುಗಳು ತರಗತಿಯ ಕಲಿಕಾ ಪ್ರಕ್ರಿಯೆ ಮತ್ತು ಕಲಿಕಾರ್ಥಿಗೂ ಅನ್ವಯಿಸುತ್ತವೆ. ಆದ್ದರಿಂದ ಕಲಿಕಾರ್ಥಿಯು ಕಲಿಕಾ ಸನ್ನಿವೇಶವನ್ನು ಪ್ರವೇಶಿಸುವ ಸಂದರ್ಭದಲ್ಲಿ ತನ್ನದೇ ಆದ ಪೂರ್ವಜ್ಞಾನ, ಪೂರ್ವಾನುಭವ ಮತ್ತು ಸಾಂಸ್ಕೃತಿಕ ಗ್ರಹಿಕೆಗಳ ಸಮೇತನಾಗಿಯೇ

ಬಂದವನಾಗಿರುತ್ತಾನೆ ಎಂಬ ಸತ್ಯದ ಅರಿವು ಕಲಿಸುವವನಿಗೆ ಇರಬೇಕಾಗುತ್ತದೆ.

ಸಂರಚನಾವಾದದ ನಂತರ ಪ್ರತ್ಯೇಕ, ಸ್ವತಂತ್ರ ಕಲಿಕಾ ಸಿದ್ಧಾಂತಗಳೆಷ್ಟೇ ಸಿದ್ಧಗೊಂಡಿದ್ದರೂ ಸರ್ವರಿಗೂ, ಸರ್ವಕಾಲಕ್ಕೂ ಒಗ್ಗುವ, ಮಿತವ್ಯಯಕಾರಿಯೂ, ಸಾಮಾಜಿಕವೂ ಆದ ಸಂರಚನಾವಾದವು ಶಿಕ್ಷಕರಿಂದ ತರಗತಿ ಮಟ್ಟದಲ್ಲಿ ಅನುಷ್ಠಾನವಾಗಬೇಕಿರುವುದು ಪ್ರಸ್ತುತ ಕಲಿಕಾ ಸಂದರ್ಭದ ಅಗತ್ಯಗಳಲ್ಲೊಂದು. ಸಂರಚನಾವಾದವು ಜ್ಞಾನಕಟ್ಟಿಕೊಳ್ಳುವ ಕಾರ್ಯದಲ್ಲಿ ಕಲಿಯುವವನ ಪಾತ್ರವನ್ನು ಅಗತ್ಯವಾಗಿ ಪರಿಗಣಿಸುವ ಮೂಲಕ ತನ್ನ ಕಲಿಕಾರ್ಥಿಯನ್ನು ಕಲಿಕೆಯ ಬಗ್ಗೆ ಜವಾಬ್ದಾರನನ್ನಾಗಿ ಮಾಡುತ್ತದೆ. ಮತ್ತು ಕಲಿಸುವ ಕೆಲಸದಲ್ಲಿ ಶಿಕ್ಷಕನ ಶ್ರಮವನ್ನೂ ಕಡಿಮೆ ಮಾಡುತ್ತದೆ. ಇಲ್ಲಿ ಶಿಕ್ಷಕನು ಕಲಿಕಾರ್ಥಿಗಳಿಗೆ ಎಲ್ಲವನ್ನೂ ಹೇಳಿಕೊಡುವುದರ ಅಗತ್ಯವಿರುವುದಿಲ್ಲ. ಬದಲಿಗೆ, ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005 ಹೇಳುವಂತೆ ಕಲಿಯುವುದನ್ನು ಕಲಿಸಿದರೆ ಸಾಕು.

ಹಾಗೆ ನೋಡಿದರೆ, ಸಂರಚನಾವಾದವು ತರಗತಿ ಬೋಧನೆಗೆ ಅನೇಕ ತಂತ್ರಗಳನ್ನು ಶಿಫಾರಸ್ಸು ಮಾಡುತ್ತದೆ ಮತ್ತು ಈ ತಂತ್ರಗಳ ಯಶಸ್ಸು ಶಿಕ್ಷಕನ ಜಾಣ್ಮೆ ಮತ್ತು ತಾಳ್ಮೆಗಳೆರಡನ್ನೂ ಅವಲಂಬಿಸಿರುತ್ತದೆ. ಶಿಕ್ಷಕರು ತರಗತಿಯಲ್ಲಿ ಆಯೋಜಿಸುವ ಯಾವುದೇ ಚಟುವಟಿಕೆಯು ಸಂರಚನಾವಾದದ ಹಿನ್ನೆಲೆಯಿಂದ ಆಗುವುದಾದರೆ, ಅದು ನಿಜವಾಗಿಯೂ ಮಕ್ಕಳಲ್ಲಿ ಜ್ಞಾನದ ಸಂರಚನೆಯನ್ನು ಯಶಸ್ವಿಗೊಳಿಸಬಲ್ಲದು. ತರಗತಿಯಲ್ಲಿನ ಬೋಧನೆಯು ಚಟುವಟಿಕೆ ಆಧಾರಿತವಾಗಿರಬೇಕು ಎಂದು ಒಪ್ಪಿಕೊಳ್ಳುವ ಶಿಕ್ಷಕರು ತಾವು ಕೈಗೊಳ್ಳುವ ಅಂತಹ ಚಟುವಟಿಕೆಗಳಿಗೆ ಸಂರಚನಾವಾದದ ಹಿನ್ನೆಲೆಯನ್ನು ಒಗ್ಗಿಸಿಕೊಳ್ಳುವುದೂ ಅಷ್ಟೇ ಮುಖ್ಯವಾಗುತ್ತದೆ.

ಸಂರಚನಾವಾದ ಮತ್ತು ಶಿಕ್ಷಕರ ತರಗತಿ ಬೋಧನೆಯಲ್ಲಿ ಅದರ ಪ್ರಯೋಗ ಸಾಧ್ಯತೆಗಳನ್ನು ಗುರುತಿಸುವುದು, ದಾಖಲಿಸುವುದು ಒಂದು ಸವಾಲಿನ ಮತ್ತು ಸಂಕೀರ್ಣವಾದ ಕೆಲಸ. ಏಕೆಂದರೆ ಸಂರಚನಾವಾದವು ಸಮಾಜವನ್ನು ಜ್ಞಾನದ ಆಕರವನ್ನಾಗಿ ಪರಿಗಣಿಸಿ ಸಾಮಾಜಿಕ ಸಂವಹನ, ಸಾಮಾಜಿಕ ಸಂಧಾನಗಳನ್ನು 'ಜ್ಞಾನವರ್ಗಾವಣೆ'ಯ ಪರಿಕರಗಳನ್ನಾಗಿ ನೋಡುವುದರಿಂದ ಸಮಾಜದ ಭಾಗವಾಗಿಯೇ ನಡೆಯುವ ಕಲಿಯುವ ಪ್ರಕ್ರಿಯೆಯಲ್ಲಿ ಅದು ಸಹಜವಾಗಿಯೇ ಇರುತ್ತದೆ. ಆದರೂ ತರಗತಿಯಂತಹ ಔಪಚಾರಿಕ ಸ್ಥಳದಲ್ಲಿ ಅದು ಪ್ರಜ್ಞಾಪೂರ್ವಕವಾಗಿ ಹೇಗೆ ಆಚರಣೆಗೊಳ್ಳುತ್ತದೆ ಎಂಬುದನ್ನು ನೋಡಲು ಹೊರಟಾಗ ಅದರ ಆಚರಣೆಗೆ ಸಾಕ್ಷಿಗಳು ಸಿಗಬಹುದು.

ಪ್ರತಿದಿನದ ಪ್ರತಿ ತರಗತಿಯಲ್ಲಿ ಹೊಸ–ಹೊಸ ವಿಷಯಗಳನ್ನು ಕಲಿಕಾರ್ಥಿಯ ಅನುಭವಕ್ಕೆ ತರುವ ಶಿಕ್ಷಕನು ತನ್ನ ವೈಯಕ್ತಿಕತೆಗೆ ಒಗ್ಗುವ ಯಾವುದೋ ಬೋಧನಾ ವಿಧಾನವನ್ನು ಬಳಸಿ ಕಲಿಸುತ್ತಿರಬಹುದು. ಅದರಲ್ಲಿ ಸಂರಚನಾವಾದ ಕೆಲವೊಮ್ಮೆ ನುಸುಳ ಬಹುದು, ಮತ್ತೆ ಕೆಲವೊಮ್ಮೆ ಇಲ್ಲದಿರಬಹುದು. ಆ ಮಟ್ಟಿಗೆ ಅದು ಅನಿಶ್ಚಿತವಾದುದು. ಆದರೂ ಕಲಿಸುವ ವಿಷಯದಲ್ಲಿ ಸಂರಚನಾವಾದವು ಒಂದು 'ಬಹು ಒಪ್ಪಿತ' ಮಾರ್ಗವಾದ್ದರಿಂದ ಶಿಕ್ಷಕರು ಅದನ್ನು ಪ್ರಜ್ಞಾಪೂರ್ವಕವಾಗಿ ಆಚರಣೆಗೆ ತರಬೇಕಾದೀತು.

ಇಂತಹ ಅರಿವುಗಳನ್ನಿಟ್ಟುಕೊಂಡು ಸಂರಚನಾವಾದದ ಪರಿಕಲ್ಪನೆ ಬಗೆಗೆ ಶಿಕ್ಷಕರನ್ನು ಸಂದರ್ಶಿಸಿ, ತರಗತಿಗಳನ್ನು ಅವಲೋಕಿಸಿದಾಗ, ಸಂರಚನಾವಾದದ ಪ್ರಯೋಗ ಸಾಧ್ಯತೆಗಳ ಬಗೆಗೆ ಕೆಲವು ಗಮನಯೋಗ್ಯ ವಿಷಯಗಳು ತಿಳಿದುಬಂದವು. ಅಧ್ಯಯನದ ವ್ಯಾಪ್ತಿಗಾಗಿ ಒಂದು ಕ್ಲಸ್ಟರ್‌ನ ಶಿಕ್ಷಕರನ್ನು ಮಾತ್ರ ಇಲ್ಲಿ ಪರಿಗಣಿಸಿರುವುದರಿಂದ ಇಲ್ಲಿ ಸಂರಚನಾವಾದದ ಬಗ್ಗೆ ಒದಗಿರುವ ಶಿಕ್ಷಕರ ಪ್ರತಿಕ್ರಿಯೆ ಮತ್ತು ದತ್ತಾಂಶಗಳನ್ನು ಸಾರ್ವತ್ರಿಕವೆಂದು ಪರಿಗಣಿಸದೆ ಪ್ರಾತಿನಿಧಿಕವಾಗಿ ನೋಡುವುದು ಉತ್ತಮವೆನಿಸುತ್ತದೆ. ಈ ಮೇರೆಗೆ, ಸಂರಚನಾವಾದದ ಪ್ರಯೋಗ ಸಾಧ್ಯತೆಗಳನ್ನು ದಾಖಲಿಸುವಾಗ ಶಿಕ್ಷಕರಿಂದ ಬಂದ ಪ್ರತಿಕ್ರಿಯೆಗಳನ್ನು ಎರಡು ಮುಖ್ಯ ನೆಲೆಗಳಲ್ಲಿ ವಿಶ್ಲೇಷಿಸಬಹುದು. ಅವುಗಳೆಂದರೆ:

ಒಂದು – ಸಂರಚನಾವಾದಕ್ಕೆ ಹಿನ್ನೆಲೆಯಾಗಿ ಕಲಿಕೆ, ಕಲಿಸುವಿಕೆ, ಬೋಧನೆ ಮತ್ತು ಸಂರಚನಾವಾದದ ಬಗ್ಗೆ ಶಿಕ್ಷಕರಿಗಿರುವ ಗ್ರಹಿಕೆಗಳು.

ಎರಡು – ಸಂರಚನಾವಾದದ ಪ್ರಾಯೋಗಿಕ ಭಾಗವಾಗಿ ಸುಗಮಗಾರಿಕೆ, ರಚನಾ ತತ್ವಗಳ ಬಗ್ಗೆ ಶಿಕ್ಷಕರಿಂದ ಕೇಳಿಬಂದ ಪ್ರತಿಕ್ರಿಯೆ ಮತ್ತು ಕಂಡುಬಂದ ಆಚರಣೆಗಳು.

## 1. ಕಲಿಕೆ, ಬೋಧನೆ ಮತ್ತು ಸಂರಚನಾವಾದದ ಬಗ್ಗೆ ಶಿಕ್ಷಕರಿಗಿರುವ ಗ್ರಹಿಕೆಗಳು

ಪ್ರಸ್ತುತ ತರಗತಿ ಪ್ರಕ್ರಿಯೆಯು 21ನೇ ಶತಮಾನದ ಹೊಸಬಗೆಯ ಕಲಿಕಾ ಮಾದರಿಗಳಿಗೆ ತೆರೆದುಕೊಂಡಿದ್ದು ಎನ್.ಸಿ.ಎಫ್. – 2005 ಶಿಶುಕೇಂದ್ರಿತ ಕಲಿಕೆಯನ್ನು ಪ್ರತಿಪಾದಿಸಿದ್ದರೂ, ಕಲಿಕೆಯ ಪರಿಕಲ್ಪನೆ ಬಗ್ಗೆ ಶಿಕ್ಷಕರಿಗಿರುವ ನಂಬಿಕೆ ಸಾಂಪ್ರದಾಯಿಕ ನೆಲೆಯಲ್ಲಿಯೇ ಇರುವುದು ಕಂಡುಬಂದಿದೆ. ತಮ್ಮದೇ ಬೋಧನಾನುಭವ ಮತ್ತು ಮಕ್ಕಳು ಕಲಿಯುವ ರೀತಿಯನ್ನು ಗಮನದಲ್ಲಿಟ್ಟುಕೊಂಡು ಕಲಿಕೆ ಎಂಬ ಪರಿಕಲ್ಪನೆಗೆ ತಮ್ಮದೇ ಆದ ಸ್ವಂತ ವ್ಯಾಖ್ಯೆಯನ್ನು ನೀಡುವಂತೆ ಕೇಳಿಕೊಂಡ ಹೊರತಾಗಿಯೂ ಬಹುತೇಕ ಶಿಕ್ಷಕರು ಕಲಿಕೆಯ ಬಗೆಗೆ ವರ್ತನಾವಾದಿಗಳು ಹೇಳುವ ಸಾಂಪ್ರದಾಯಿಕ ವ್ಯಾಖ್ಯೆಯನ್ನೇ ಪುನರುಚ್ಚರಿಸಿದ್ದಾರೆ. ಕಲಿಕೆ ಎಂಬುದು ಅಸಹಜ ಮತ್ತು ಪ್ರಯತ್ನಪೂರ್ವಕವಾಗಿ ಆರ್ಜಿಸಿಕೊಳ್ಳಬೇಕಾದ ತುಸು ಪ್ರಯಾಸದ ಕ್ರಿಯೆ ಎಂಬುದು ಹೆಚ್ಚಿನವರ ಅಭಿಮತ; ಕಲಿಕೆ ಎಂಬುದು ಸಹಜ ಮತ್ತು ನಮ್ಯ ಎಂಬ ಗ್ರಹಿಕೆ ಬೆರಳೆಣಿಕೆಯ ಶಿಕ್ಷಕರದ್ದು. ಕಲಿಕೆ ಎಂಬುದನ್ನು ಒಂದು ಪ್ರಕ್ರಿಯೆಯಾಗಿ ನೋಡದೆ ಅದನ್ನೊಂದು ಬಿಡಿ ಪರಿಕಲ್ಪನೆಯಾಗಿಯೇ ನೋಡುವ ರೂಢಿ ಬಹುತೇಕ ಶಿಕ್ಷಕರದ್ದು. ವಿಷಯ, ಪದ, ವಾಕ್ಯ, ಸೂತ್ರ, ಇವುಗಳು ಮಕ್ಕಳಿಂದ ಯಥಾವತ್ ಪುನರುಚ್ಚಾರಣೆಯಾದರೆ ಅದನ್ನೇ 'ಕಲಿಕೆ' ಎಂದು ಪರಿಭಾವಿಸುವುದೂ ಇದೆ.

ಕಲಿಕೆಯು ಸ್ವಂತ ಅನುಭವಗಳ ಮೇಲೆ ನೆಲೆಗೊಳ್ಳುವಂಥದ್ದು ಎಂಬುದಕ್ಕಿಂತ ಅದು ಪುನರಾವರ್ತಿತ ಅಭ್ಯಾಸಗಳಿಂದ ಸಿದ್ಧಿಗೊಳ್ಳುವಂಥದ್ದು ಎಂಬುದು ಕಲಿಕೆಯ ಬಗೆಗೆ ಕೆಲವು ಶಿಕ್ಷಕರ ನಿಲುವು. ಶಿಕ್ಷಕರು ನಂಬುವ 'ಕಲಿಕೆ' ಬಹುಪಾಲು ಸ್ಮರಣೆಗೆ ಸಂಬಂಧಿಸಿದ್ದಾಗಿದೆ. ಪಠ್ಯ, ಪಠ್ಯದ ವಿಷಯವನ್ನು ಕಂಠಪಾಠ ಮಾಡಿ ಅದನ್ನು ನೆನಪಿನಲ್ಲಿಟ್ಟುಕೊಂಡು ಯಥಾವತ್ತಾಗಿ ಹೇಳುವುದು/ಬರೆಯುವುದನ್ನು 'ಕಲಿಕಾ

ಖಾತ್ರಿ'ಯೆಂದು ಅವರು ಭಾವಿಸುತ್ತಾರೆ. ಕೇವಲ ಅಕ್ಷರಗಳನ್ನು ಓದುವುದು ಮತ್ತು ಬರೆಯುವುದನ್ನೂ ಕಲಿಕೆ ಎನ್ನುವವರಿದ್ದಾರೆ. ಅಲ್ಲದೆ ಹೆಚ್ಚಿನವರು ಕಲಿಕೆಯನ್ನು ಶಾಲೆಗೆ ಮಾತ್ರ ಸ್ಥಾನೀಕರಿಸಿ ಹೇಳುತ್ತಾರೆ. ಕಲಿಕೆ ಎಂಬುದು ಒಂದು ಬೌದ್ಧಿಕ ಕಸರತ್ತಿನ ಫಲ ಎಂದು ನಂಬಿರುವ ಶಿಕ್ಷಕರು ಕಲಿಕೆಯೊಂದಿಗೆ ಇರುವ ಭಾವನಾತ್ಮಕ ಸಂಬಂಧಗಳನ್ನು ಗಂಭೀರವಾಗಿ ಪರಿಗಣಿಸಿದಂತೆ ಕಾಣುವುದಿಲ್ಲ. ಶಿಕ್ಷಕರು ಕಲಿಕೆಯಲ್ಲಿ ಮಗುವಿನ ಸ್ವ-ಅನುಭವ, ಸ್ವಂತ ಜ್ಞಾನದ ಪಾತ್ರವನ್ನು ಪರಿಗಣಿಸದಿರುವುದೂ ಕಂಡುಬಂದಿದೆ. ಕಲಿಕೆಯನ್ನು ಮಗುವಿನ ಒಟ್ಟು ಜ್ಞಾನ ಸಂರಚನೆಯ ಭಾಗವಾಗಿ ನೋಡದೆ ಅದನ್ನು ತರಗತಿಯ ಯಾವುದೋ ಒಂದು ಪಾಠಕ್ಕೆ ಅಲ್ಲಿನ ಪ್ರಶ್ನೋತ್ತರಗಳಿಗೆ ಸೀಮಿತವಾಗಿ ನೋಡುವುದು ಹೆಚ್ಚಾಗಿ ಕಂಡುಬಂದಿದೆ.

ಮಕ್ಕಳು ಹೇಗೆ ಕಲಿಯುತ್ತಾರೆ? ಎಂಬುದರ ಬಗ್ಗೆ ಶಿಕ್ಷಕರಿಗಿರುವ ಗ್ರಹಿಕೆಗಳು ಹೆಚ್ಚೇನೂ ಭಿನ್ನವಾಗಿರದೆ ಕಲಿಕೆಯ ಬಗ್ಗೆ ಅವರಿಗಿರುವ ಗ್ರಹಿಕೆಗಳನ್ನೇ ಅನುಸರಿಸಿದವುಗಳಾಗಿವೆ. ಹೆಚ್ಚಿನ ಶಿಕ್ಷಕರು ಮಕ್ಕಳು ವೀಕ್ಷಣೆಯಿಂದ, ಅನುಕರಣೆಯಿಂದ ಪರಿಸರದ ಪ್ರಭಾವದಿಂದ, ನೋಡಿ-ಮಾಡಿ ಕಲಿಯುತ್ತಾರೆ ಎಂದು ಹೇಳಿದರೂ ಹಾಗೆ ಹೇಳುವ ಅದೇ ಶಿಕ್ಷಕರ ತರಗತಿ ಅಭ್ಯಾಸಗಳನ್ನು ನೋಡಿದಾಗ ಅವರ ಅಭಿಪ್ರಾಯ-ಆಚರಣೆಗಳ ನಡುವೆ ಅಂತರವಿರುವುದು ಕಂಡುಬಂದಿತು. ಮಕ್ಕಳು 'ಅನುಕರಣೆಯಿಂದ ಕಲಿಯುತ್ತಾರೆ' ಎಂಬ ಸಾಂಪ್ರದಾಯಿಕ ಅಭಿಪ್ರಾಯವೇ ಹೆಚ್ಚು ಕೇಳಿಬಂದಿದೆ. ಈ ನಿಟ್ಟಿನಲ್ಲಿ ಮಕ್ಕಳು ಅನುಸರಣೆಯಿಂದ ಕಲಿಯುವ ಸತ್ಯವನ್ನು ಯಾವುದೇ ಶಿಕ್ಷಕರು ಉಲ್ಲೇಖಿಸಿಲ್ಲ. ಮಕ್ಕಳು ಕಲಿಯುವುದರ ಬಗ್ಗೆ ಶಿಕ್ಷಕರು ಕಲಿಸುವವರಾಗಿಯೇ ಮಾತನಾಡುತ್ತಾರೆ. ಈ ಕಾರಣದಿಂದಲೇ ಅವರು ಮಗುವಿನಲ್ಲಿ ಆಗುವ ಸ್ವ-ಕಲಿಕೆಯನ್ನು ಹೆಚ್ಚು ಉಲ್ಲೇಖಿಸುವುದಿಲ್ಲ. ಕಲಿಯುವಿಕೆಯಲ್ಲಿ ಪೂರಕ 'ಕಲಿಕಾ ವಾತಾವರಣ' ನಿರ್ಮಾಣ ಮಾಡಿಕೊಡುವ ಮಹತ್ತ್ವದ ವಿಚಾರವನ್ನು ಶಿಕ್ಷಕರು ಪರಿಗಣಿಸದೆ ಇರುವುದೂ ಕಂಡುಬಂದಿದೆ.

ಇನ್ನು ಕಲಿಕೆ ಮತ್ತು ಕಲಿಯುವಿಕೆಯನ್ನು ಸ್ವಂತ ಅನುಭವದಲ್ಲಿ ವ್ಯಾಖ್ಯಾನಿಸುವವರೂ ಇಲ್ಲದಿಲ್ಲ. ಕೆಲವಾದರೂ ಶಿಕ್ಷಕರು ತಮ್ಮ ವೃತ್ತಿ ಅನುಭವದ ಆಧಾರದಿಂದ ಕಲಿಕೆಯನ್ನು ವ್ಯಾಖ್ಯಾನಿಸಿದ್ದಾರೆ. ಇಂಥವರು ಕಲಿಕೆಯನ್ನು ಹುಟ್ಟಿನಿಂದ ಸಾಯುವತನಕ ವಿಕಾಸಗೊಳ್ಳುವ ಬೌದ್ಧಿಕ ಮತ್ತು ಮಾನಸಿಕ ಸ್ಥಿತಿ ಎಂದು ಭಾವಿಸುತ್ತಾರೆ. ಶಾಲೆಯಲ್ಲಿ ನಡೆಯುವ ಕಲಿಕೆಯನ್ನು ಇದರ ಅಧೀನದಲ್ಲಿಯೇ ಗ್ರಹಿಸುವ ಇವರು ಕಲಿಕೆ ಎಂಬುದು 'ಅಪೇಕ್ಷಿತ ವರ್ತನಾತ್ಮಕ ಬದಲಾವಣೆ' ಎಂಬುದನ್ನು ಅಲ್ಲಗಳೆಯುತ್ತಾರೆ. ಕಲಿಕೆಯನ್ನು ಒಂದು ಸಹಜ ಪ್ರಕ್ರಿಯೆ ಎಂದು ಗುರುತಿಸುವ ಇವರು ಕಲಿಕೆಯಲ್ಲಿ ಕಲಿಯುವವನ ಪಾತ್ರವೇ ನಿರ್ಣಾಯಕ ಎನ್ನುತ್ತಾರೆ. ಉಳಿದಂತೆ ಕಲಿಕೆ ಎಂಬುದು ಯಾವಾಗಲೂ ಹೊಸದಾಗಿ ನಡೆಯದೆ ಅದು ಪೂರ್ವಜ್ಞಾನ ಮತ್ತು ಪೂರ್ವಾನುಭವಗಳ ಆಧಾರದ ಮೇಲೆಯೇ ಉಂಟಾಗುತ್ತದೆ ಎಂಬುದನ್ನು, ಕಲಿಕೆ ಎಂಬುದು ಸ್ವ-ಕಲಿಕೆಯೂ ಆಗಬಹುದು ಎಂಬುದನ್ನು ಅಗತ್ಯವಾಗಿ ಒಪ್ಪುತ್ತಾರೆ. ಕಲಿಕೆ, ಕಲಿಸುವಿಕೆಯ ಬಗೆಗೆ ಇಂತಹ ಅಭಿಪ್ರಾಯಗಳನ್ನು ಹೊಂದಿರುವ ಶಿಕ್ಷಕರಲ್ಲಿ ಹೆಚ್ಚಿನವರು

ಇತ್ತೀಚೆಗೆ ಡಿ.ಎಡ್. ಮತ್ತು ಬಿ.ಎಡ್. ನಂತಹ ತರಬೇತಿಯನ್ನು ಪಡೆದ ಶಿಕ್ಷಕರು ಎಂಬುದು ಒಂದು ವಿಶೇಷ. ಆದರೆ ಇವರೂ ಸಹ ಮಕ್ಕಳು ಅನುಕರಣೆಯಿಂದಲೇ ಕಲಿಯುತ್ತಾರೆ ಎಂದು ನಂಬಿರುವುದು ಒಂದು ಮಿತಿಯಾಗಿ ಕಂಡುಬಂದಿದೆ.

ಕಲಿಕೆ ಮತ್ತು ಕಲಿಕಾ ನಿರ್ವಹಣೆಯ ಗುರುತರ ಜವಾಬ್ದಾರಿಯನ್ನು ಹೊಂದಿರುವ ಶಿಕ್ಷಕರು ಬೋಧನೆಯ ಬಗೆಗೆ ಆದರ್ಶೀಕೃತ ನಿಲುವುಗಳನ್ನು ಹೊಂದಿದ್ದಾರೆ. ಬೋಧನೆಯೇ ಶಿಕ್ಷಕರ 'ವೃತ್ತೀಯ ಅಸ್ಮಿತೆ' ಎಂಬುದು ಶಿಕ್ಷಕರ ಸಾಮಾನ್ಯ ಅಭಿಪ್ರಾಯ. ಇದರ ಹೊರತಾಗಿ ಅವರು ಬೋಧನೆಯನ್ನು ಸ್ವ-ಕೇಂದ್ರಿತವಾಗಿಯೇ ಹೆಚ್ಚಾಗಿ ನೋಡುತ್ತಾರೆ. ಕಲಿಕೆ ಬಗ್ಗೆ ಸ್ವಂತ ವ್ಯಾಖ್ಯೆಯನ್ನು ಹೇಳಲಾಗದ ಶಿಕ್ಷಕರು ಇಲ್ಲಿ ಕಲಿಕೆಯನ್ನು ಬೋಧನೆಯ ಅಧೀನವಾಗಿಯೇ ಪರಿಗ್ರಹಿಸಿರುವುದು ಕಾಣುತ್ತದೆ. ಬೋಧನೆ ಎಂದರೇನು? ಎಂಬ ನೇರ ಪ್ರಶ್ನೆಗೆ ಅವರು ನೀಡುವ ಸಾಮಾನ್ಯ ಉತ್ತರಗಳಿವು: ಪಾಠದ ವಿವರಣೆ, ವಿಷಯ ನಿರೂಪಣೆ, 'ಕಪ್ಪು ಹಲಗೆಯ ವ್ಯವಸ್ಥಿತ ಬಳಕೆಯೊಂದಿಗೆ ಸೂಕ್ತ ಬೋಧನೋಪಕರಣಗಳನ್ನು ಬಳಸಿಕೊಂಡು ಉದ್ದೇಶಿತ ವಿಷಯ/ಪಠ್ಯವನ್ನು ಉದಾಹರಣೆ ಸಹಿತವಾಗಿ ಮಕ್ಕಳಿಗೆ ಮನದಟ್ಟು ಮಾಡುವುದೇ ಬೋಧನೆ.'

ಬೋಧನೆಗೆ ಪೂರ್ವಸಿದ್ಧತೆಯ ಅಗತ್ಯವನ್ನು ಒತ್ತಿ ಹೇಳುವ ಶಿಕ್ಷಕರು ತಾವು ಮಾಡಿಕೊಂಡ ತಮ್ಮ ಸಿದ್ಧತೆಗಳಿಗೆ ಅನುಗುಣವಾಗಿ ಬೋಧಿಸಿದ ಹೊರತಾಗಿಯೂ ಮಕ್ಕಳು ನಿರೀಕ್ಷಿತ ಮಟ್ಟದಲ್ಲಿ ಪ್ರತಿಕ್ರಿಯಿಸುವುದಿಲ್ಲ ಎಂಬ ಸವಾಲನ್ನು ಹಂಚಿಕೊಳ್ಳುತ್ತಾರೆ. ವಿಷಯದ ಸಂಪೂರ್ಣ ಜ್ಞಾನ, ಚಟುವಟಿಕೆಗಳು, ಮಗುಕೇಂದ್ರಿತ, ಆಸಕ್ತಿಯುತ ಮತ್ತು ಮುಕ್ತ ಬೋಧನೆ ಇವು ಉತ್ತಮ ಬೋಧನೆಗೆ ಇರಬೇಕಾದ ಲಕ್ಷಣಗಳು ಎಂದು ಸಲಹೆ ಮಾಡುತ್ತಾರೆ. ಬೋಧನೆಯನ್ನು ತಮ್ಮ ಕೆಲಸ, ಪಾತ್ರ, ಜವಾಬ್ದಾರಿಯ ಭಾಗವೆಂದೇ ಭಾವಿಸುವ ಹೆಚ್ಚಿನ ಶಿಕ್ಷಕರು ಅದನ್ನು ಕಲಿಕಾ ಫಲಗಳ ನೆಲೆಯಿಂದ ಮಾತನಾಡದಿರುವುದು ಕಂಡುಬಂದಿತು. ಈ ನಿಟ್ಟಿನಲ್ಲಿ ಬೋಧನೆ ಮತ್ತು ಕಲಿಕೆಯ ನಡುವೆ ಇರುವ ತಾರ್ಕಿಕ/ಸಮನ್ವಿತ ಸಂಬಂಧವನ್ನು ಅವರು ಆಳವಾಗಿ ಗ್ರಹಿಸದಿರುವುದು ಕಾಣುತ್ತದೆ.

ಸಂರಚನಾವಾದವು ಕಲಿಕೆಯನ್ನು ನೇರವಾಗಿ ವ್ಯಾಖ್ಯಾನಿಸದಿದ್ದರೂ ಅದು ಜ್ಞಾನದ ಸಂರಚನೆಯನ್ನೇ ಕಲಿಕೆ ಎಂದೂ, ಜ್ಞಾನ ಸಂರಚನೆಯಾಗುವಂತೆ ಶಿಕ್ಷಕನು ತರಗತಿಯಲ್ಲಿ ತೋರಬೇಕಾದ ನಿರ್ವಹಣೆಯನ್ನೇ ಬೋಧನೆ (ಸುಗಮಗಾರಿಕೆ) ಎಂದೂ ಪರಿಭಾವಿಸುತ್ತದೆ. ಆದ್ದರಿಂದ ಸಂರಚನಾವಾದದ ಹಿನ್ನೆಲೆಯಲ್ಲಿ ಶಿಕ್ಷಕರ ತರಗತಿ ಬೋಧನೆಯನ್ನು ದಾಖಲಿಸುವ ಮುನ್ನ ಸಂರಚನಾವಾದದ ಬಗ್ಗೆ ಅವರ ಗ್ರಹಿಕೆಗಳನ್ನು ಪರಿಶೀಲಿಸುವುದು ಅಧ್ಯಯನದ ದೃಷ್ಟಿಯಿಂದ ಅಪೇಕ್ಷಣೀಯವೆನಿಸಿತು. ಸಂರಚನಾವಾದವು ಬಹುತೇಕ ಶಿಕ್ಷಕರಿಗೆ ಒಂದು ಪದವಾಗಿ ಪರಿಚಿತವಾಗಿದೆಯೇ ಹೊರತು ಅದನ್ನು ಪರಿಕಲ್ಪನೆಯಾಗಿ / ಸಿದ್ಧಾಂತವಾಗಿ ಬಲ್ಲವರು ತೀರಾ ವಿರಳ. ಕೆಲವು ಶಿಕ್ಷಕರಿಗೆ ಸಂರಚನಾವಾದ ಎಂಬ ಪದದ ಪರಿಚಯವೂ ಇಲ್ಲದಿರುವುದು ಕಂಡುಬಂದಿದೆ. ಎನ್.ಸಿ.ಎಫ್. 2005ರಲ್ಲಿ ಈ ಮಾರ್ಗದ ಬಗ್ಗೆ ಸಾಕಷ್ಟು ಚರ್ಚೆ ಇದ್ದರೂ ಇಲಾಖೆಯ ಮಟ್ಟದಲ್ಲಿ ಇತ್ತೀಚೆಗೆ ನಡೆಯುತ್ತಿರುವ ಟಿ.ಪಿ.ಡಿ.ಯಂತಹ

ತರಬೇತಿಗಳಿಂದ ಅದರ ಪರಿಚಯವಾಗಿರುವುದನ್ನು ಶಿಕ್ಷಕರು ಸಂದರ್ಶನದ ವೇಳೆ ಒಪ್ಪಿಕೊಂಡಿದ್ದಾರೆ. ಕೆಲವು ಶಿಕ್ಷಕರು ತಮ್ಮ ಡಿ.ಎಡ್./ಬಿ.ಎಡ್. ವ್ಯಾಸಂಗದ ಅವಧಿಯಲ್ಲಿ ಸಂರಚನಾವಾದದ ಬಗ್ಗೆ ಓದಿದ್ದನ್ನು ನೆನಪಿಸಿಕೊಳ್ಳುತ್ತಾ ಅದನ್ನೀಗ ಮರೆತಿರುವುದಾಗಿ ಹೇಳಿದ್ದಾರೆ. ಅಲ್ಲದೆ ಇದೇ ಶಿಕ್ಷಕರನ್ನು ಕಲಿಕಾ ಸಿದ್ಧಾಂತಗಳ ಬಗ್ಗೆ ವಿಚಾರಿಸಿದಾಗ ಅವರು ವರ್ತನಾವಾದಿಗಳ ಸಿದ್ಧಾಂತವನ್ನೇ ಹೆಚ್ಚಾಗಿ ಉಲ್ಲೇಖಿಸುವುದು ಕಂಡುಬಂದಿದೆ. ಸಂರಚನಾವಾದದ ಬಗ್ಗೆ ತರಬೇತಿಯಲ್ಲಿ ತಿಳಿದುಕೊಂಡ ಶಿಕ್ಷಕರು, ಒಂದು ಸಿದ್ಧಾಂತವಾಗಿ ಅದು ಜ್ಞಾನರಚನೆಯ ಬಗ್ಗೆ ಹೇಳಿರುವ ತಾತ್ವಿಕ ವಿಷಯಗಳನ್ನು ಹೇಳುತ್ತಾರೆಯೇ ಹೊರತು ತರಗತಿಯ ಕಲಿಕಾ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಅದನ್ನು ವಿವರಿಸದೇ ಇರುವುದು ಕಂಡುಬಂದಿದೆ.

ಒಟ್ಟಿನಲ್ಲಿ ಕಲಿಕೆ, ಕಲಿಸುವಿಕೆ, ಬೋಧನೆ ಮತ್ತು ಸಂರಚನಾವಾದದ ಬಗ್ಗೆ ಶಿಕ್ಷಕರಿಗಿರುವ ಒಟ್ಟು ಗ್ರಹಿಕೆಗಳನ್ನು ಪರಿಗಣಿಸಿ ಅಂತಹ ಶಿಕ್ಷಕರ ತರಗತಿಗಳನ್ನು ವೀಕ್ಷಿಸಿದಾಗ, ಅವುಗಳ ಬಗ್ಗೆ ಶಿಕ್ಷಕರ ಗ್ರಹಿಕೆ, ದೃಷ್ಟಿಕೋನಗಳು ಉನ್ನತ ಮಟ್ಟದಲ್ಲಿದ್ದರೂ ತರಗತಿ ಆಚರಣೆಯಲ್ಲಿ ಅವುಗಳ ಪ್ರಯೋಗದಲ್ಲಿ ಅಂತರವಿರುವುದು ಕಂಡುಬಂದಿದೆ. ಇತ್ತೀಚೆಗೆ ಸೇವೆಗೆ ಸೇರಿದ ಶಿಕ್ಷಕರು ಕಲಿಕೆ ಮತ್ತು ಕಲಿಸುವಿಕೆಯನ್ನು ಭಿನ್ನವಾಗಿ ನೋಡುತ್ತಾರಾದರೂ ಆ ನಿಟ್ಟಿನಲ್ಲಿ ಅವರ ತರಗತಿ ಪ್ರಕ್ರಿಯೆಗಳು ಮತ್ತಷ್ಟು ಮುಕ್ತ ಮತ್ತು ಉದಾರವಾಗಬೇಕಾದ ಅಗತ್ಯವಿದೆ.

## 2. ಸುಗಮಗಾರಿಕೆ, ರಚನಾ ತತ್ವಗಳು ಮತ್ತು ಶಿಕ್ಷಕರ ಆಚರಣೆಗಳು

ಒಂದು ಬೋಧನಾ ಮಾರ್ಗವಾಗಿ ಕಲಿಕೆಯ ಯಶಸ್ಸಿಗೆ ಸಂರಚನಾವಾದವು ಸುಗಮಗಾರಿಕೆಯನ್ನು ಸಲಹೆ ಮಾಡುತ್ತದೆ. ಸುಗಮಗಾರಿಕೆಯಿಂದ ಸಂರಚನಾವಾದದ ನೆಲೆ–ಬೆಲೆಯೂ ಹೆಚ್ಚುತ್ತದೆ. ಆದ್ದರಿಂದ ತರಗತಿ ಸನ್ನಿವೇಶದಲ್ಲಿ ಸಂರಚನಾವಾದವನ್ನು ಒಂದು ಬೋಧನಾ ಮಾರ್ಗವಾಗಿಯೂ, ಸುಗಮಗಾರಿಕೆಯನ್ನು ಅದಕ್ಕೆ ಪೂರಕವಾದ ಬೋಧನಾ ಮಾದರಿಯನ್ನಾಗಿಯೂ ನೋಡಬಹುದು. ಸುಗಮಗಾರಿಕೆಯು ಜ್ಞಾನದ ವರ್ಗಾವಣೆಗಿಂತ ಜ್ಞಾನದ ನಿರ್ವಹಣೆಯನ್ನು ಬಯಸುತ್ತದೆ. ಸಂರಚನಾವಾದಕ್ಕೆ ಅನುಗುಣವಾಗಿ ಕಲಿಕೆಯನ್ನು ನಿರ್ವಹಿಸಲು ಹೊರಡುವ ಯಾವುದೇ ಶಿಕ್ಷಕನಿಗೆ ಸುಗಮಗಾರಿಕೆಯು ಉತ್ತಮ ಆಯ್ಕೆಯಾಗಬಲ್ಲದು. ಗುಣಮಟ್ಟದ ಕಲಿಕೆಯನ್ನು ಅಪೇಕ್ಷಿಸುವ ಎನ್.ಸಿ.ಎಫ್. 2005 ಬೋಧನಾ–ಕಲಿಕಾ ಪ್ರಕ್ರಿಯೆಯಲ್ಲಿ ಸಂರಚನಾವಾದ ಮತ್ತು ಸುಗಮಗಾರಿಕೆಯ ಸಂಯೋಜನೆಯನ್ನು ನಿರೀಕ್ಷಿಸುತ್ತದೆ. ಅಂತಹ ಸಂರಚನಾವಾದದ ಬಗ್ಗೆ ಮಾತನಾಡುತ್ತಿರುವಾಗ ಅದರ ಅನುಷ್ಠಾನಕ್ಕೆ ಹೆಚ್ಚು ಸಮಂಜಸವೆನಿಸಿದ ಸುಗಮಗಾರಿಕೆಯ ಬಗ್ಗೆ ಶಿಕ್ಷಕರಿಗಿರುವ ತಿಳಿವಳಿಕೆ, ಪ್ರಾಯೋಗಿಕ ಜ್ಞಾನವನ್ನು ಪರಿಗಣಿಸುವುದೂ ಮುಖ್ಯವೆಂದು ತೋರುತ್ತದೆ.

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005 ಶಿಕ್ಷಕರನ್ನು 'ಸುಗಮಕಾರರು; ಕಲಿಕೆಯನ್ನು ಅನುಕೂಲಿಸುವವರು' ಎಂದೇ ಕರೆಯುತ್ತದೆ. ಇತ್ತೀಚೆಗೆ ಇಲಾಖೆಯ ಮಟ್ಟದಲ್ಲಿ ನಡೆಯುತ್ತಿರುವ ತರಬೇತಿಗಳಿಂದ ಶಿಕ್ಷಕರಿಗೆ 'ಸುಗಮಗಾರಿಕೆ' ಎಂಬ ಪರಿಕಲ್ಪನೆಯ

ಪರಿಚಯವಾದಂತಿದೆ. ಈ ನಿಟ್ಟಿನಲ್ಲಿ ಶಿಕ್ಷಕರನ್ನು ಸಂದರ್ಶಿಸಿದಾಗ ಮತ್ತು ಅವರ ತರಗತಿಗಳನ್ನು ವೀಕ್ಷಿಸಿದಾಗ ಅವರಿಗೆ 'ಸುಗಮಗಾರಿಕೆ' ಎಂಬುದು ಬೋಧನೆಗಿಂತ ಭಿನ್ನವಾದ ಪರಿಕಲ್ಪನೆ ಎಂಬ ಅರಿವಿದ್ದರೂ ಅದು ಹೇಗೆ ಭಿನ್ನ? ಅದು ನಿರೀಕ್ಷಿಸುವ ತರಗತಿ ಆಚರಣೆಗಳು ಹೇಗಿರಬೇಕು? ಎಂಬ ಬಗ್ಗೆ ಸ್ಪಷ್ಟ ಅರಿವು ಇದ್ದಂತಿಲ್ಲ. ಆದರೂ ಸುಗಮಗಾರಿಕೆಯ ತಂತ್ರವನ್ನು ತರಗತಿ ಪ್ರಕ್ರಿಯೆಯಲ್ಲಿ ಬಳಸುವವರು ಇಲ್ಲದಿಲ್ಲ. ಆದರೆ ಅಂತಹ ಶಿಕ್ಷಕರಲ್ಲಿಯೂ ಕೆಲವರು 'ಸುಗಮಗಾರಿಕೆ' ಎಂದರೆ, 'ಬೋಧಿಸುವ ಬದಲು ಕಲಿಕೆಗೆ ಮಾರ್ಗದರ್ಶನ ಮಾಡುವುದು' ಎಂಬ ಅಪಕಲ್ಪನೆಯನ್ನು ಹೊಂದಿದ್ದಾರೆ. ಈ ನಿಟ್ಟಿನಲ್ಲಿ 'ಬೋಧಿಸುವ ಬದಲು ಕಲಿಕೆಗೆ ಸಹಾಯ ಮಾಡುವುದೇ ಸುಗಮಗಾರಿಕೆ' ಎಂಬಲ್ಲಿಗೆ ಅವರ ಅರಿವು ವಿಸ್ತರಿಸಬೇಕಿದೆ. ಸಂದರ್ಶನದ ವೇಳೆ ಶಿಕ್ಷಕರು ನೀಡಿದ ಪ್ರತಿಕ್ರಿಯೆಯ ಆಧಾರದ ಮೇಲೆ ಹೇಳುವುದಾದರೆ, ಶೇ.70 ರಷ್ಟು ಶಿಕ್ಷಕರು ಬೋಧಕ–ಸುಗಮಗಾರರಾಗಿ, ಶೇ.25ರಷ್ಟು ಶಿಕ್ಷಕರು ಬೋಧಕರಾಗಿ ಮತ್ತು ಶೇ. 5ರಷ್ಟು ಶಿಕ್ಷಕರು ಸಂಪೂರ್ಣ ಸುಗಮಗಾರರಾಗಿ ಕಲಿಸುವಿಕೆಯನ್ನು ನಿರ್ವಹಿಸುವುದಾಗಿ ಹೇಳಿಕೊಂಡಿದ್ದಾರೆ.

ರಚನಾತತ್ವಗಳು (5–'ಇ'ಗಳು) ಸಂರಚನಾವಾದಕ್ಕೆ ಪೂರಕವಾಗಿಯೇ ಇವೆ. ಸಂರಚನಾವಾದದ ಆಶಯವು 'ರಚನಾತತ್ವ'ಗಳ ಆಚರಣೆಯಲ್ಲಿ ಕಾಣಸಿಗುತ್ತದೆ. 'ರಚನಾತತ್ವಗಳು ಕಲಿಕಾ ಪ್ರಕ್ರಿಯೆಯಲ್ಲಿ ಜ್ಞಾನದ ರಚನೆ ಮತ್ತು ಪುನರ್ ರಚನೆಗೆ ನೆರವಾಗುವುದರಿಂದ ಸಂರಚನಾವಾದದ ತತ್ವಗಳನ್ನು 'ರಚನಾತತ್ವ'ಗಳೆಂದೇ ಪರಿಗಣಿಸಬಹುದು. ಹಾಗೆ ನೋಡಿದರೆ, 'ರಚನಾತತ್ವ'ಗಳು ಸಂರಚನಾವಾದ ಮತ್ತು ಸುಗಮಗಾರಿಕೆಗಳ ಸಮನ್ವಯ ರೂಪವೆಂದೂ ಒಪ್ಪಬಹುದು. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005ರ ಆಶಯದ ಕಾರಣದಿಂದ ಇತ್ತೀಚೆಗೆ ಸುಗಮಗಾರಿಕೆ ಮತ್ತು ಸಂರಚನಾ ಮಾದರಿಯ ಬೋಧನೆಗೆ ಹೆಚ್ಚಿನ ಆದ್ಯತೆ ನೀಡುತ್ತಿರುವ ಶಿಕ್ಷಣ ಇಲಾಖೆಯು ಅದಕ್ಕೆ ಪೂರಕವಾಗಿ ಶಿಕ್ಷಕರು ತಮ್ಮ ನಿತ್ಯದ ಬೋಧನೆಯಲ್ಲಿ ಅಳವಡಿಸಿಕೊಳ್ಳಬಹುದಾದ ರಚನಾತತ್ವಗಳನ್ನು ತನ್ನ ವಿವಿಧ ಹಂತದ ದಾಖಲೆಗಳಲ್ಲಿ (ಪ್ರಾಥಮಿಕ ಶಾಲಾ ಶೈಕ್ಷಣಿಕ ಮಾರ್ಗದರ್ಶಿ) ಪ್ರಚಾರಮಾಡಿದೆಯಲ್ಲದೆ 2013–14ರಿಂದ 'ರಚನಾ' ಹೆಸರಿನಲ್ಲಿ ಪಠ್ಯಪುಸ್ತಕ ಆಧಾರಿತ ತರಬೇತಿಯನ್ನೂ ನೀಡುತ್ತಾ ಬಂದಿದೆ. ಇಂತಹ 'ರಚನಾತತ್ವ'ಗಳು ಶಿಕ್ಷಕರು, ಪಾಠಯೋಜನೆಯ ಸಂದರ್ಭದಲ್ಲಿ ಅಳವಡಿಸಿಕೊಳ್ಳಬೇಕಾದ ತತ್ವಗಳೂ ಹೌದು ಮತ್ತು ಅವನ್ನು ತರಗತಿಯಲ್ಲಿ ಅನುಷ್ಠಾನಗೊಳಿಸಬೇಕಾದ ತತ್ವಗಳೂ ಹೌದು. ಜ್ಞಾನರಚನೆ ಎಂಬುದು 'ವ್ಯವಸ್ಥಿತ / ಕ್ರಮಾನುಗತವಾಗಿ ನಡೆಯುವ ಪ್ರಕ್ರಿಯೆಯಾಗಿದ್ದು 'ರಚನಾತತ್ವಗಳೂ ಆ ನಿಟ್ಟಿನಲ್ಲಿಯೇ ವಿನ್ಯಾಸಗೊಂಡಿರುವುದರಿಂದ ಅವು ಮಗುವಿನಲ್ಲಿ ಜ್ಞಾನವೆಂಬುದು ಸ್ವಂತಜ್ಞಾನವಾಗಿ ನೆಲೆಗೊಳ್ಳಲು ನೆರವಾಗುತ್ತವೆ.' ಎಂಬುದನ್ನು ಶಿಕ್ಷಕರು ಮನಗಾಣಬೇಕಿದೆ. ಅಂತಹ ರಚನಾ ತತ್ವಗಳು ಹೀಗಿವೆ:

1. ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿಸುವುದು
2. ಆವಿಷ್ಕರಿಸುವಿಕೆ

3. ಸ್ಪಷ್ಟಪಡಿಸು/ವಿವರಣೆ
4. ವಿಸ್ತರಣೆ/ದೃಢೀಕರಣ
5. ಮೌಲ್ಯಮಾಪನ

ಸಂರಚನಾವಾದ / ರಚನಾತತ್ವಗಳ ಬಗ್ಗೆ ಶಿಕ್ಷಕರು ತಿಳಿದಿದ್ದರೂ ಅವು ಪಾಠಯೋಜನೆಗೆ ಮಾತ್ರ ಸೀಮಿತವಾಗಿರುವುದು ಕಾಣುತ್ತದೆ. ಶಿಕ್ಷಕರಿಗೆ ರಚನಾ ತತ್ವಗಳ ಮಹತ್ವದ ಬಗ್ಗೆ ಅರಿವಿದ್ದರೂ ಬೇರೆ-ಬೇರೆ ಕಾರಣಗಳಿಗೆ ಅವನ್ನು ತಮ್ಮ ತರಗತಿ ಪ್ರಕ್ರಿಯೆಗಳಲ್ಲಿ ಪಾಲಿಸಲಾಗದ ಸ್ಥಿತಿಯನ್ನು ಒಪ್ಪಿಕೊಳ್ಳುತ್ತಾರೆ. ರಚನಾತತ್ವಗಳನ್ನು ತಮ್ಮ ತರಗತಿಯಲ್ಲಿ ಆಚರಣೆಗೆ ತರುವುದಾಗಿ ಹೇಳುವ ಶಿಕ್ಷಕರ ತರಗತಿಗಳನ್ನು ಅವಲೋಕಿಸಿದಾಗ ತತ್ವಗಳ ಪೈಕಿ ಒಂದೋ, ಎರಡೋ ತತ್ವಗಳನ್ನು ಮಾತ್ರ ಪರಿಗಣಿಸುವುದು ಕಂಡುಬಂದಿದೆ.

ಇನ್ನು, ಸಂರಚನಾವಾದದ ಪ್ರಾಯೋಗಿಕ ಅಭ್ಯಾಸಗಳನ್ನು ಗುರುತಿಸಿ ದಾಖಲಿಸಲು ಶಿಕ್ಷಕರ ಪ್ರಾಯೋಗಿಕ ತರಗತಿಗಳನ್ನು ಅವಲೋಕಿಸಲಾಗಿದ್ದು, ಆ ನಿಟ್ಟಿನಲ್ಲಿ ಮುಖ್ಯವಾಗಿ ಮೂರು ಮಾನದಂಡಗಳನ್ನು ಇರಿಸಿಕೊಳ್ಳಲಾಗಿತ್ತು. ಅವುಗಳೆಂದರೆ:

1. ಶಿಕ್ಷಕರು ತಮ್ಮ ಬೋಧನೆಯಲ್ಲಿ ಮಗುವಿನ ಪೂರ್ವಜ್ಞಾನವನ್ನು ಪರಿಗಣಿಸಿ ಅದನ್ನು ಹೊಸ ವಿಷಯದೊಂದಿಗೆ ಸಹ-ಸಂಬಂಧೀಕರಿಸುತ್ತಿದ್ದಾರೆಯೇ?
2. ಶಿಕ್ಷಕರು ತಮ್ಮ ಬೋಧನೆಯಲ್ಲಿ ರಚನಾತತ್ವಗಳನ್ನು ಪಾಲಿಸುತ್ತಿದ್ದಾರೆಯೇ?
3. ಶಿಕ್ಷಕರು ಸುಗಮಗಾರರಾಗಿ ತರಗತಿಯನ್ನು ನಿರ್ವಹಿಸುತ್ತಿದ್ದಾರೆಯೇ?

ಮೇಲಿನ ಮಾನದಂಡಗಳ ಹಿನ್ನೆಲೆಯಲ್ಲಿ ಶಿಕ್ಷಕರ ತರಗತಿಗಳನ್ನು ವೀಕ್ಷಿಸಿದಾಗ ಕಂಡುಬಂದ ತರಗತಿ ಆಚರಣೆಗಳಿಗೆ ಅನುಗುಣವಾಗಿ ಶಿಕ್ಷಕರನ್ನು ನಾಲ್ಕು ರೀತಿಗಳಲ್ಲಿ ಕೆಳಗಿನಂತೆ ಪರಿಗಣಿಸಬಹುದು.

1. ಸಂರಚನಾವಾದದ ಪೂರ್ಣ ಪರಿಚಯವಿದ್ದು ಅದನ್ನು ತರಗತಿಯಲ್ಲಿ ಆಚರಣೆಗೆ ತರುವ ಶಿಕ್ಷಕರು.
2. ಕೇವಲ ಸಂರಚನಾವಾದದ ಪದ ಪರಿಚಯವಿದ್ದು ಅದನ್ನು ಅಪ್ರಜ್ಞಾಪೂರ್ವಕವಾಗಿ ಆಚರಣೆಯಲ್ಲಿ ತರುವ ಶಿಕ್ಷಕರು.
3. ಪದವನ್ನೇ ಕೇಳದಿದ್ದರೂ ಅಪ್ರಜ್ಞಾಪೂರ್ವಕವಾಗಿ ಸಂರಚನಾವಾದವನ್ನು ಆಚರಣೆಯಲ್ಲಿ ತರುವ ಶಿಕ್ಷಕರು.
4. ಸಂರಚನಾವಾದದ ಅರಿವಿರುವ ಮತ್ತು ಅರಿವಿಲ್ಲದೆ ಇತರೆ ವಿಧಾನಗಳನ್ನು ತರಗತಿಯಲ್ಲಿ ಬಳಸುವ ಶಿಕ್ಷಕರು.

ಮೊದಲ ಗುಂಪಿನ ಶಿಕ್ಷಕರು ಸಂರಚನಾವಾದದ ಪರಿಕಲ್ಪನೆ ಮತ್ತು ಅದರ ಶೈಕ್ಷಣಿಕ ನಿಹಿತಾರ್ಥಗಳನ್ನು ಅರಿತುಕೊಂಡು ಅದನ್ನು ತರಗತಿಯಲ್ಲಿ ಆಚರಣೆಗೆ ತರುವವರಾಗಿದ್ದಾರೆ. ಸೇವಾಪೂರ್ವ ಶಿಕ್ಷಕರ ತರಬೇತಿಯಲ್ಲಿ ಸಂರಚನಾವಾದದ ಪರಿಕಲ್ಪನಾತ್ಮಕ ಅರಿವನ್ನು ಪಡೆದ ಈ ಶಿಕ್ಷಕರು ಸೇವೆಗೆ ಸೇರಿದ ನಂತರ ಇಲಾಖೆಯು ನೀಡಿದ ತರಬೇತಿಗಳಿಂದ ಸಂರಚನಾವಾದದ ಪ್ರಾಯೋಗಿಕತೆಯ ಬಗ್ಗೆ ಆಸಕ್ತಿ ತಳೆದು, ಸ್ವ-ಆಸ್ಥೆಯಿಂದ ಮತ್ತು ತರಗತಿಯಲ್ಲಿ ಆ ಮಾದರಿಯ ಬೋಧನೆಗೆ ಮಕ್ಕಳಿಂದ

ತೋರಿಬಂದ ಪ್ರತಿಕ್ರಿಯೆಗಳಿಂದ ಪ್ರೇರಣೆಗೊಂಡು ಅದನ್ನು ಆಚರಣೆಗೆ ತಂದವರಾಗಿದ್ದಾರೆ. ಮೇಲೆ ಹೇಳಿದಂತೆ ಕಲಿಕೆಯ ಬಗೆಗೆ ಸ್ವಂತ ವ್ಯಾಖ್ಯೆಯನ್ನು ನೀಡಲು ಪ್ರಯತ್ನಿಸಿದ ಶಿಕ್ಷಕರಲ್ಲಿ ಕೆಲವರು ಇಂತಹ ಆಚರಣೆಗಳನ್ನು ಪಾಲಿಸುವುದು ಕಂಡುಬಂದಿದೆ. ರಚನಾತತ್ವಗಳನ್ನು ತಮ್ಮ ತರಗತಿಗಳಲ್ಲಿ ಪಾಲಿಸುವ ಈ ಶಿಕ್ಷಕರು ಮಕ್ಕಳ ಪೂರ್ವಜ್ಞಾನ ಮತ್ತು ಅಭಿವ್ಯಕ್ತಿಗೆ ಹೆಚ್ಚಿನ ಒತ್ತು ನೀಡಿ ಪರಿಗಣಿಸುವವರಾಗಿದ್ದಾರೆ. ಮತ್ತು ಇವರು ಸುಗಮಗಾರರಾಗಿಯೇ ತರಗತಿಯನ್ನು ನಿರ್ವಹಿಸುತ್ತಾರೆ. ಮಕ್ಕಳಿಗೆ ಪೂರ್ವಜ್ಞಾನದ ಪ್ರಶ್ನೆಗಳನ್ನು ಕೇಳುವುದು, ಪ್ರಶ್ನೆಗಳನ್ನು ಕೇಳಲು ಮಕ್ಕಳಿಗೆ ಮುಕ್ತ ಅವಕಾಶವನ್ನು ಒದಗಿಸುವುದು, ಚರ್ಚೆ, ಸಂವಾದ, ಗುಂಪು ಚಟುವಟಿಕೆ, ಯೋಜಿತ ಕಾರ್ಯ ಇತ್ಯಾದಿ ಚಟುವಟಿಕೆಗಳನ್ನು ಇವರು ಕೈಗೊಳ್ಳುತ್ತಾರೆ. ಪರಿಗಣಿತ ಶಿಕ್ಷಕರಲ್ಲಿ ಇವರ ಪ್ರಮಾಣ ಶೇ. 0.3

**ಮಾದರಿ ತರಗತಿ :** ಕ್ಷೇತ್ರಕಾರ್ಯದ ನಿಮಿತ್ತ ಸಂರಚನಾವಾದದ ಹಿನ್ನೆಲೆಯಲ್ಲಿ ಕೆಲವು ಶಿಕ್ಷಕರ ತರಗತಿಗಳನ್ನು ವೀಕ್ಷಿಸಲಾಗಿದ್ದು ಅಲ್ಲಿ ಶಿಕ್ಷಕರೊಬ್ಬರಿಂದ ತೋರಿಬಂದ ಬೋಧನಾ-ಕಲಿಕಾ ಪ್ರಕ್ರಿಯೆಯ ಸಂದರ್ಭವನ್ನು ಇಲ್ಲಿ ಪ್ರಾತಿನಿಧಿಕವಾಗಿ ದಾಖಲಿಸಲಾಗಿದೆ.

**ಗದ್ಯ** : ಚಗಳಿ ಇರುವೆ

**ತರಗತಿ** : 7ನೇ ತರಗತಿ — **ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

**ತೊಡಗಿಸುವಿಕೆ :**

**ಶಿಕ್ಷಕ** : ಮಕ್ಕಳೇ ನೀವು ಇರುವೆಗಳನ್ನು ನೋಡಿದ್ದೀರಾ?

**ಮಕ್ಕಳು** : ನೋಡಿದ್ದೇವೆ ಸಾರ್...

**ಶಿ** : ಯಾವ-ಯಾವ ಇರುವೆಗಳನ್ನು ನೋಡಿದ್ದೀರ?

**ಮ** : ಕೆಂಪಿರುವೆ, ಕಪ್ಪಿರುವೆ, ಪೆದ್ದಿರುವೆ, ಗೆದ್ದಲು ಇರುವೆ, ಕಟ್ಟಿರುವೆ......

**ಶಿ** : ಅವು ಎಲ್ಲಿ ವಾಸಿಸುತ್ತವೆ, ಹೇಗೆ ವಾಸಿಸುತ್ತವೆ ಎಂಬುದನ್ನು ನೀವು ಗಮನಿಸಿದ್ದೀರಾ?

**ಮ** : ಹೌದು ನೋಡಿದ್ದೇವೆ; ಅವು ಇರುವೆ ಗೂಡುಗಳಲ್ಲಿ ವಾಸಿಸುತ್ತವೆ.

**ಶಿ** : ಓಹ್! ನೀವು ಇರುವೆ ಗೂಡುಗಳನ್ನು ನೋಡಿದ್ದೀರಿ ಎಂದಾಯಿತು. ಹಾಗಾದರೆ ಆ ಗೂಡುಗಳು ಹೇಗಿರುತ್ತವೆ? ಅವುಗಳನ್ನು ಇರುವೆಗಳು ಹೇಗೆ ಕಟ್ಟುತ್ತವೆ? ಎಂಬುದನ್ನು ಹೇಳಬಲ್ಲಿರಾ?

**ಮ** : ಅವು ನೆಲದ ಮೇಲೆ ಮಣ್ಣನ್ನು ಕೆದಕಿ ಗೂಡುಗಳನ್ನು ಕಟ್ಟುತ್ತವೆ.

**ಶಿ** : ಹೂ ಮತ್ತೆ? ಹೇಗೆ ಗೂಡುಕಟ್ಟುತ್ತವೆ ಅದನ್ನು ಹೇಳಿ.

**ಮ** : ನಿರುತ್ತರ

**ಶಿ** : ನೀವು ಮರದ ಮೇಲೆ ವಾಸಿಸುವ, ಮರದಮೇಲೆ ಗೂಡುಕಟ್ಟುವ ಇರುವೆಗಳನ್ನು ನೋಡಿದ್ದೀರಾ?

ಮ : ನಿರುತ್ತರ

ಶಿ : ಯಾರೂ ನೋಡಿಲ್ಲವೇ? ಹಾಗಾದರೆ ಅಂತಹ ಒಂದು ವಿಶೇಷ ಇರುವೆಯ ಬಗ್ಗೆ ಇಂದಿನ ತರಗತಿಯಲ್ಲಿ ತಿಳಿದುಕೊಳ್ಳೋಣವೇ?

ಮ : ಆಗಬಹುದು ಸರ್.

**ಸ್ಪಷ್ಟಪಡಿಸು/ವಿವರಣೆ :**

ಶಿ : ಇರುವೆಗಳ ವರ್ಗದಲ್ಲೇ ಅತ್ಯಂತ ಅದ್ಭುತವೆಂದು ವರ್ಣನೆಗೊಳಗಾಗಿರುವ ಚಗಳಿ ಇರುವೆಗಳು ಮಲೆನಾಡಿಗರಿಗೆ ಚಿರಪರಿಚಿತ........

ಶಿ : ಸಂಘಜೀವನ ಎಂದರೇನು?

ಮ : ನಿರುತ್ತರ

ಶಿ : ಎಲ್ಲರೂ ಒಗ್ಗಟ್ಟಿನಿಂದ ಬದುಕುವುದೇ ಸಂಘ ಜೀವನ (ಮುಂದುವರಿಕೆ) ಇವುಗಳು ಕೊಟ್ಟೆಗಳನ್ನು ರಚಿಸುವ ರೀತಿಯನ್ನು ನೋಡಿ.........

ಶಿ : ಸ್ತ್ರೀ ಪ್ರಧಾನ ಸಮಾಜ ಎಂದರೇನು?

ಮ : ನಿರುತ್ತರ

ಶಿ : ಯಾವ ಮನೆಯಲ್ಲಿ ಹೆಣ್ಣು, ಕುಟುಂಬವನ್ನು ಮುನ್ನಡೆಸುತ್ತಾಳೆಯೋ ಅದನ್ನು ಸ್ತ್ರೀ ಪ್ರಧಾನ ಕುಟುಂಬ ಎನ್ನುವರು.

**ಆವಿಷ್ಕರಿಸುವಿಕೆ :**

ಶಿ : ಮಕ್ಕಳೇ ನೀವು ನಿಮ್ಮ ಊರಿನಲ್ಲಿ ಇರುವ ಸ್ತ್ರೀ ಪ್ರಧಾನ ಕುಟುಂಬಗಳ ಬಗ್ಗೆ ಮಾಹಿತಿ ಸಂಗ್ರಹಿಸಿ.

**ವಿಸ್ತರಣೆ/ದೃಢೀಕರಣ :**

ಶಿ : ಮಕ್ಕಳೇ, ನಿಮ್ಮ ಊರಿನಲ್ಲಿ ಕಂಡುಬರುವ ಇರುವೆಗಳನ್ನು ಪಟ್ಟಿಮಾಡಿ ನಿಮಗೆ ಇಷ್ಟಬಂದ ಯಾವುದಾದರೂ ಒಂದು ಇರುವೆ ಗೂಡು ಕಟ್ಟುವ ವಿಧಾನ ಮತ್ತು ಅದರ ಬದುಕಿನ ರೀತಿಯ ಬಗ್ಗೆ ತಿಳಿದುಕೊಂಡು ಬನ್ನಿರಿ.

**ಮೌಲ್ಯಮಾಪನ :**

ಶಿ : ಕೊಟ್ಟೆ ಎಂದರೇನು?

ಮ : ಚಗಳಿ ಇರುವೆಗಳು ಕಟ್ಟುವ ಗೂಡನ್ನು ಕೊಟ್ಟೆ ಎಂದು ಕರೆಯುತ್ತಾರೆ

ಶಿ : ಕೆಲಸಗಾರ ಇರುವೆಗಳ ಕೆಲಸವೇನು?

ಮ : . . . . . .

ಎರಡನೇ ಗುಂಪಿನ ಶಿಕ್ಷಕರು ಸಂರಚನಾವಾದದ ಸೈದ್ಧಾಂತಿಕ ಅರಿವಿಲ್ಲದಿದ್ದರೂ ಸ್ವ-ಪ್ರೇರಣೆಯಿಂದ ಮತ್ತು ಇಲಾಖೆಯ ತರಬೇತಿ ದೆಸೆಯಿಂದ 5 'ಇ' ತತ್ವಗಳ ಆಚರಣೆಗೆ ಗಮನ ಹರಿಸುವವರಾಗಿದ್ದಾರೆ. ಆದರೆ ಇವರು ಐದೂ ಬಗೆಯ ರಚನಾತತ್ವಗಳನ್ನು ಪಾಲಿಸದಿರುವುದು ಕಂಡುಬಂದಿದೆ. ಇಂತಹ ಶಿಕ್ಷಕರು ಬೋಧಕ-ಸುಗಮಗಾರರಾಗಿ ತರಗತಿಗಳನ್ನು ನಿರ್ವಹಿಸುತ್ತಾರೆ. ಇವರು ಮಕ್ಕಳ ಪೂರ್ವಜ್ಞಾನವನ್ನು ಪರಿಗಣಿಸುತ್ತಾರಾದರೂ ಮಕ್ಕಳಿಗೆ ಪ್ರಶ್ನೆಗಳನ್ನು ಕೇಳಲು ಹೆಚ್ಚೇನೂ ಅವಕಾಶ ನೀಡುವುದಿಲ್ಲ. ಆದರೆ ಇವರಲ್ಲಿಯೂ ಗುಂಪುಚರ್ಚೆ, ಸಂವಾದ, ಅಭಿವ್ಯಕ್ತಿಯಂತಹ ಚಟುವಟಿಕೆಗಳಿಗೆ ಅವಕಾಶಗಳುಂಟು. ಪರಿಗಣಿತ ಶಿಕ್ಷಕರ ಪೈಕಿ ಇವರ ಪ್ರಮಾಣ ಶೇ. 13.

ಮೂರನೇ ಗುಂಪಿನ ಶಿಕ್ಷಕರು ಸಂರಚನಾವಾದದ ಬಗ್ಗೆ ಯಾವುದೇ ತಿಳಿವಳಿಕೆಯನ್ನು ಹೊಂದಿರದವರಾಗಿದ್ದು, ಇವರು ಸ್ವ-ಪ್ರೇರಣೆಯಿಂದ ಸಂರಚನಾವಾದದ ಕೆಲವು ತತ್ವಗಳನ್ನು ತಮ್ಮ ಬೋಧನೆಯಲ್ಲಿ ತರುವವರಾಗಿದ್ದಾರೆ. ಇವರು ಸಂಪೂರ್ಣ ಬೋಧಕರಾಗಿ ನಡೆದುಕೊಂಡರೂ ಕಲಿಕೆಯಲ್ಲಿ ಮಕ್ಕಳನ್ನು ತೊಡಗಿಸಲು 'ರಚನಾತತ್ವ'ಗಳ ಪೈಕಿ ಒಂದನ್ನಾದರೂ ಪರಿಗಣಿಸುವವರಾಗಿದ್ದಾರೆ. ತರಗತಿ ಪ್ರಕ್ರಿಯೆಯ ನಡುವೆ ನಿರಂತರವಾಗಿ ಪ್ರಶ್ನೆಗಳನ್ನು ಕೇಳಿ ಅದಕ್ಕೆ ಮಕ್ಕಳಿಂದ ಉತ್ತರ ಪಡೆಯುವುದು ಇವರು ಬಳಸುವ ಸಾಮಾನ್ಯ ಚಟುವಟಿಕೆಯಾಗಿದೆ. ಪರಿಗಣಿತ ಶಿಕ್ಷಕರ ಪೈಕಿ ಇವರ ಪ್ರಮಾಣ ಶೇ.3.

ನಾಲ್ಕನೇ ಗುಂಪಿನಲ್ಲಿ ಕೇವಲ ಸಂರಚನಾವಾದ ಎಂಬ ಪದವು ಮಾತ್ರ ಪರಿಚಯವಿರುವ, ಪರಿಕಲ್ಪನಾತ್ಮಕ ಅರಿವಿರುವ ಹಾಗೂ ಪದವನ್ನೇ ಕೇಳದ – ಈ ಮೂರೂ ಬಗೆಯ ಶಿಕ್ಷಕರಿದ್ದು ಅವರು ಸಂರಚನಾವಾದಕ್ಕೆ ಬದಲಾಗಿ ಇತರೆ ವಿಧಾನಗಳನ್ನು ಬಳಸುವವರಾಗಿದ್ದಾರೆ. ಇವರು ಸಾಂಪ್ರದಾಯಿಕ ಮಾದರಿಯ ಬೋಧನಾ ವಿಧಾನಗಳಲ್ಲಿ ತರಗತಿಯನ್ನು ನಿರ್ವಹಿಸುತ್ತಿರುವುದು ಕಂಡುಬಂದಿದೆ. ಇಂತಹ ಶಿಕ್ಷಕರಲ್ಲಿ ಬಹುತೇಕರು ಕಂಠಪಾಠದಂತಹ ಯಾಂತ್ರಿಕ ವಿಧಾನಗಳನ್ನು ಬಳಸುತ್ತಾರೆ. ಇವರ ತರಗತಿಗಳು ಹೆಚ್ಚು ಬಿಗಿಯಿಂದ ಕೂಡಿದ್ದು ಮಕ್ಕಳ ಅಭಿವ್ಯಕ್ತಿಗೆ ಇರುವ ಅವಕಾಶ ಶೂನ್ಯವಾಗಿದೆ. ಪರಿಗಣಿತ ಶಿಕ್ಷಕರಲ್ಲಿ ಸಂರಚನಾವಾದದ ಬದಲು ಇತರೆ ವಿಧಾನಗಳನ್ನು ಬಳಸುವವರ ಪ್ರಮಾಣ. ಶೇ.86.7

## ಶಿಕ್ಷಕರ ಬೋಧನಾ ಆಚರಣೆಗಳಲ್ಲಿ ಸಂರಚನಾ ತತ್ವಗಳ ಬಳಕೆ

(ಸಂಖ್ಯೆ ಮತ್ತು ಶೇ. ಪ್ರಮಾಣಗಳಲ್ಲಿ)

| | ಅರಿವು | ಸಂಖ್ಯೆ | ಶೇ. | ಬಳಕೆ | ಸಂಖ್ಯೆ | ಶೇ. |
|---|---|---|---|---|---|---|
| 1. | ಗೊತ್ತಿದೆ. ಪದ ಪರಿಚಯವಿದೆ ಆದರೆ, ಪರಿಕಲ್ಪನೆ ಮತ್ತು ಶೈಕ್ಷಣಿಕ ನಿಹಿತಾರ್ಥಗಳು ತಿಳಿದಿಲ್ಲ | 21 | 60 | ಕೇವಲ ಸಂರಚನಾವಾದ ಎಂಬ ಪದದ ಪರಿಚಯ ವಿದ್ದು ಅದನ್ನು ಅಪ್ರಜ್ಞಾಪೂರ್ವಕವಾಗಿ ಆಚರಣೆಯಲ್ಲಿ ತರುವವರು | 03 | 10 |
| | | | | ಪದದ ಪರಿಚಯವಿದ್ದು ಇತರೆ ಬೋಧನಾ ಮಾದರಿ ಗಳನ್ನು ಬಳಸುವವರು | 17 | 50 |
| 2. | ಗೊತ್ತಿದೆ. ಪರಿಕಲ್ಪನೆ ಮತ್ತು ಶೈಕ್ಷಣಿಕ ನಿಹಿತಾರ್ಥಗಳು ತಿಳಿದಿವೆ | 01 | 02 | ಸಂರಚನಾವಾದದ ಪೂರ್ಣ ಪರಿಚಯವಿದ್ದು ಅದನ್ನು ಆಚರಣೆಗೆ ತರುವವರು | 01 | 0.3 |
| | | | | ಸಂರಚನಾವಾದದ ಪೂರ್ಣ ಪರಿಚಯವಿದ್ದು ಬೇರೆ ವಿಧಾನಗಳನ್ನು ಬಳಸುವವರು | 01 | 1.7 |
| 3. | ಗೊತ್ತಿಲ್ಲ. ಪದವನ್ನೇ ಕೇಳಿಲ್ಲ | 13 | 38 | ಪದವನ್ನೇ ಕೇಳದಿದ್ದರೂ ಅಪ್ರಜ್ಞಾಪೂರ್ವಕವಾಗಿ ಸಂರಚನಾವಾದವನ್ನು ಆಚರಣೆಯಲ್ಲಿ ತರುವವರು | 01 | 3 |
| | | | | ಪದವನ್ನು ಕೇಳದವರಲ್ಲಿ ಸಂರಚನಾವಾದವನ್ನು ಬಿಟ್ಟು ಇತರೆ ಬೋಧನಾ ಆಚರಣೆ ಗಳನ್ನು ಮಾಡುವವರು | 12 | 35 |
| | | | | ಸಂರಚನಾವಾದದ ಬದಲು ಇತರೆ ವಿಧಾನಗಳನ್ನು ಬಳಸುವವರು | 30 | 86.7 |
| | | | | ಸಂರಚನಾವಾದ ಮಾದರಿಯ ಬೋಧನಾ ಆಚರಣೆಗಳನ್ನು ಬಳಸುವವರು | 5 | 13.3 |
| | **ಒಟ್ಟು** | **35** | **100** | **ಒಟ್ಟು** | **35** | **100** |


ಶಿಕ್ಷಕರ ಮಾದರಿ – 1
ಗೊತ್ತಿದೆ–ಪದ ಪರಿಚಯವಿದೆ ಆದರೆ, ಪರಿಕಲ್ಪನೆ ಮತ್ತು ಶೈಕ್ಷಣಿಕ ನಿಹಿತಾರ್ಥಗಳು ತಿಳಿದಿಲ್ಲ
ಪದ ಪರಿಚಯವಿದ್ದು ಇತರೆ ಬೋಧನಾ ಮಾದರಿಗಳನ್ನು ಬಳಸುವವರು
ಕೇವಲ ಸಂರಚನಾವಾದದ ಪದ ಪರಿಚಯವಿದ್ದು ಅದನ್ನು ಅಪ್ರಜ್ಞಾಪೂರ್ವಕವಾಗಿ ಆಚರಣೆಯಲ್ಲಿ ತರುವವರು
0
10
20
30
40
50
60
70


ಶಿಕ್ಷಕರ ಮಾದರಿ – 2
ಗೊತ್ತಿದೆ – ಪರಿಕಲ್ಪನೆ ಮತ್ತು ಶೈಕ್ಷಣಿಕ ನಿಹಿತಾರ್ಥಗಳು ತಿಳಿದಿವೆ
ಸಂರಚನಾವಾದದ ಪೂರ್ಣ ಪರಿಚಯವಿದ್ದು ಬೇರೆ ವಿಧಾನಗಳನ್ನು ಬಳಸುವವರು
ಸಂರಚನಾವಾದದ ಪೂರ್ಣ ಪರಿಚಯವಿದ್ದು ಅದನ್ನು ಆಚರಣೆಗೆ ತರುವವರು
0
0.5
1
1.5
2
2.5


ಶಿಕ್ಷಕರ ಮಾದರಿ – 2
ಗೊತ್ತಿಲ್ಲ – ಪದವನ್ನೇ ಕೇಳಿಲ್ಲ
ಪದವನ್ನು ಕೇಳದವರಲ್ಲಿ ಸಂರಚನಾವಾದವನ್ನು ಹೊರತುಪಡಿಸಿದ ಇತರೆ ಬೋಧನಾ ಆಚರಣೆಗಳನ್ನು ಮಾಡುವವರು
ಪದವನ್ನೇ ಕೇಳದಿದ್ದರೂ ಅಪ್ರಜ್ಞಾಪೂರ್ವಕವಾಗಿ ಸಂರಚನಾವಾದವನ್ನು ಆಚರಣೆಯಲ್ಲಿ ತರುವವರು
0
5
10
15
20
25
30
35


ತರಗತಿಯಲ್ಲಿ ಸಂರಚನಾವಾದ ಮತ್ತು ಇತರೆ ಬೋಧನಾ ಆಚರಣೆಗಳು
ಸಂರಚನಾವಾದ ಮಾದರಿಯ ಬೋಧನಾ ಆಚರಣೆಗಳನ್ನು ಬಳಸುವವರು
ಸಂರಚನಾವಾದದ ಬದಲು ಇತರೆ ವಿಧಾನಗಳನ್ನು ಬಳಸುವವರು
0
10
20
30
40
50
60
70
80
90
100

## ಶಿಕ್ಷಕರ ತರಗತಿ ಪ್ರಕ್ರಿಯೆಯಲ್ಲಿ ಸಂರಚನಾವಾದದ ಆಚರಣೆಗೆ ಕಂಡುಬಂದ ಸವಾಲುಗಳು

ಸಂರಚನಾವಾದವು ಒಂದು ಉತ್ತಮ ಕಲಿಕಾ ಪ್ರಕ್ರಿಯೆಯ ಮಾರ್ಗವಾಗಿದ್ದರೂ ಶಿಕ್ಷಕರ ಮಟ್ಟದಲ್ಲಿ ಅದರ ಪ್ರಾಯೋಗಿಕ ಆಚರಣೆಗೆ ತೊಡಕುಗಳು ಇಲ್ಲದಿಲ್ಲ. ಸಂರಚನಾವಾದದ ಮಟ್ಟಿಗೆ ಇಲಾಖೆಯು ಎಷ್ಟೇ ಕಳಕಳಿ ತೋರಿದರೂ ಅದು ಎಲ್ಲೆಡೆಯೂ ನೋಡಲು ಸಿಗದಿರುವುದಕ್ಕೆ ಶಿಕ್ಷಕರ ಮಟ್ಟದಲ್ಲಿ ಅನೇಕ ಸವಾಲುಗಳಿರುವುದು ಕಂಡುಬಂದಿದೆ. ಸಂದರ್ಶನ ಮತ್ತು ತರಗತಿ ಅವಲೋಕನದ ಸಂದರ್ಭದಲ್ಲಿ ಶಿಕ್ಷಕರಲ್ಲಿ ಸಂರಚನಾವಾದದಂತಹ ಸವಾಲುಗಳನ್ನು ಗುರುತಿಸುವುದಾದರೆ:

ಬಹುತೇಕ ಶಿಕ್ಷಕರಲ್ಲಿ ಸಂರಚನಾವಾದದ ಸೈದ್ಧಾಂತಿಕ ಅರಿವಿನ ಕೊರತೆ ಇರುವುದು ಮುಖ್ಯವಾಗಿ ಕಂಡುಬಂದಿದೆ.

✳ ಸಂರಚನಾವಾದವು ಚಟುವಟಿಕೆ ಆಧಾರಿತ ಬೋಧನೆಯನ್ನು ನಿರೀಕ್ಷಿಸುವುದರಿಂದ, ಅದಕ್ಕೆ ಹೆಚ್ಚಿನ ಪೂರ್ವಸಿದ್ಧತೆಯ ಅಗತ್ಯವಿರುವ ಕಾರಣಕ್ಕೆ ಶಿಕ್ಷಕರು ಸಾಂಪ್ರದಾಯಿಕ ಮಾದರಿಯಲ್ಲೇ ಬೋಧಿಸುವುದು ಕಂಡುಬಂದಿದೆ.

✳ ಸಂರಚನಾವಾದದ ಪ್ರಕಾರ ತರಗತಿಗಳನ್ನು ನಿರ್ವಹಿಸುವುದಾದರೆ, ಅದಕ್ಕೆ ಹೆಚ್ಚಿನ ಸಮಯಾವಕಾಶದ ಅಗತ್ಯವಿದ್ದು ಆ ಮಾದರಿಯನ್ನು ಅನುಸರಿಸಿದರೆ ಪಠ್ಯಕ್ರಮವನ್ನು ನಿಗದಿತ ಸಮಯಕ್ಕೆ ಪೂರ್ಣಗೊಳಿಸಲಾಗುವುದಿಲ್ಲ ಎಂಬ ಕಾರಣವನ್ನೂ ಶಿಕ್ಷಕರು ಮುಂದಿಡುತ್ತಾರೆ.

✳ ಕೆಲವು ಶಿಕ್ಷಕರಿಗೆ ಸಂರಚನಾವಾದದ ಪೂರ್ಣ ಅರಿವಿದ್ದರೂ ವೈಯಕ್ತಿಕ ನಿರಾಸಕ್ತಿಯ ಕಾರಣದಿಂದಲೂ ಅದನ್ನು ಪಾಲಿಸದಿರುವುದು ಕಂಡುಬಂದಿದೆ.

✳ ಸಂರಚನಾವಾದವನ್ನು ಅನುಸರಿಸದ ಬಹುತೇಕ ಶಿಕ್ಷಕರು ಅದಕ್ಕೆ ಪ್ರಸ್ತುತ ಜಾರಿಯಲ್ಲಿರುವ ಪಠ್ಯಕ್ರಮ ಮತ್ತು ಮೌಲ್ಯಮಾಪನ ಪದ್ಧತಿಗಳನ್ನು ದೂರುತ್ತಾರೆ.

✳ ಕೆಲವು ಶಿಕ್ಷಕರು ಪಾಠಾಂತ್ಯದಲ್ಲಿ ನೀಡಲ್ಪಟ್ಟ ಪ್ರಶ್ನೆಗಳಿಗೆ ಮಕ್ಕಳು ಉತ್ತರಿಸುವಂತೆ ಅಣಿಗೊಳಿಸುವುದೇ 'ಕಲಿಕೆ' ಎಂದು ಭಾವಿಸಿದ್ದು ಅದಕ್ಕನುಗುಣವಾಗಿಯೇ ಬೋಧಿಸಬೇಕು ಎಂಬ ನಂಬಿಕೆಗೆ ಅಂಟಿಕೊಂಡಿರುವುದು ಕಂಡುಬಂದಿದೆ.

## ಉಪಸಂಹಾರ

ಇತ್ತೀಚೆಗೆ ಪ್ರಾಥಮಿಕ ಶಾಲಾಹಂತದಲ್ಲಿ ಕಲಿಸುವ ಪ್ರಕ್ರಿಯೆ ಬದಲಾಗಬೇಕಾದ ಬಗ್ಗೆ ಸಾಕಷ್ಟು ಒತ್ತಾಸೆಗಳು ಮತ್ತು ಇಲಾಖಾ ಮಟ್ಟದ ಕ್ರಮಗಳು ಜರುಗಿದ್ದರೂ ಮಕ್ಕಳ ಕಲಿಕೆಯಲ್ಲಿ ನಿರೀಕ್ಷಿತ ಬದಲಾವಣೆಗಳಾಗದಿರುವುದಕ್ಕೆ ಅನೇಕ ಕಾರಣಗಳಿವೆ. ಇಂತಹ ಸಂದರ್ಭದಲ್ಲಿ ಶಿಕ್ಷಕರ ಪಾತ್ರ ಮತ್ತು ಜವಾಬ್ದಾರಿಗಳು ಮತ್ತಷ್ಟು ಗಟ್ಟಿ ಮತ್ತು ಗುರುತರವಾಗಬೇಕಾದ ಅನಿವಾರ್ಯತೆ ಇದೆ. ಕಾಲದಿಂದ ಕಾಲಕ್ಕೆ ಕಲಿಕೆ/ಕಲಿಸುವಿಕೆಯ ಬಗೆಗೆ ನಡೆದಿರುವ ಸಂಶೋಧನೆಗಳು ಶಿಕ್ಷಕರು ತಮ್ಮ ವೃತ್ತಿಯನ್ನು ಅದಕ್ಕನುಗುಣವಾಗಿ ಮಾರ್ಪಡಿಸಿಕೊಳ್ಳುವ ಅಗತ್ಯವನ್ನು ಹೇಳುತ್ತಲೇ ಬಂದಿವೆ. ಈ ನಿಟ್ಟಿನಲ್ಲಿ ಶಿಕ್ಷಕನು

ಕಲಿಸುವವನಾಗಿ ಕಲಿಯುವವನಿಗೆ ಸಮೃದ್ಧ ಕಲಿಕಾ ಅನುಭವಗಳನ್ನು ನೀಡಿದಾಗ ಮಾತ್ರ ಕಲಿಕಾ ಪ್ರಕ್ರಿಯೆಯು ಯಶಸ್ವಿಯಾಗಬಲ್ಲದು. ಕಲಿಕೆ ಎಂಬುದು ಯಾಂತ್ರಿಕವಲ್ಲವಾದ್ದರಿಂದ ಕಲಿಸುವವನು ಮಕ್ಕಳ ವಯೋ–ಮಾನಸಿಕ ಸಾಮರ್ಥ್ಯಗಳನ್ನು ಮತ್ತು ಭಾವನೆಗಳನ್ನು ಪರಿಗಣಿಸಿ ಅದಕ್ಕನುಗುಣವಾಗಿ ಕಲಿಸಬೇಕಾಗುತ್ತದೆ. ಇದನ್ನು ಅಂಗೀಕರಿಸುವಾಗ ಶಿಕ್ಷಕನು ತನ್ನ ತರಗತಿ ಪ್ರಕ್ರಿಯೆಯಲ್ಲಿ ಹೊಸ–ಹೊಸ ಬೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳುವುದು, ಹಳೆಯದನ್ನು ಕೈಬಿಡುವುದು ಆಗಬೇಕಾಗುತ್ತದೆ.

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005ರಲ್ಲಿ ಶಿಕ್ಷಣದ ಬಗ್ಗೆ ತಳೆದ ಫಲದಾಯಕ ನಿಲುವುಗಳು ಇತ್ತೀಚಿನ ಶಿಕ್ಷಣದ ಸ್ವರೂಪದಲ್ಲಿ ಬದಲಾವಣೆಗೆ ಕಾರಣವಾಗಿವೆ. ಶಿಕ್ಷಣದ ಮುಖ್ಯ ಅಂಗವಾದ ಬೋಧನಾ–ಕಲಿಕಾ ಪ್ರಕ್ರಿಯೆಯಲ್ಲಿ ಅದು ಬದಲಾಗಬೇಕಾದ ಶಿಕ್ಷಕನ ಪಾತ್ರದ ಬಗ್ಗೆ ಸಾಕಷ್ಟು ಕಾಳಜಿ ವಹಿಸಿದೆ. ತರಗತಿ ಪ್ರಕ್ರಿಯೆಯಲ್ಲಿ ಶಿಕ್ಷಕರು ಕಲಿಸುವವರಾಗದೆ ಕಲಿಕೆಯನ್ನು ಅನುಕೂಲಿಸುವವರಾಗಬೇಕು ಎನ್ನುತ್ತದೆ. ಇದು ಯಶಸ್ವಿಯಾಗಲು ಶಿಕ್ಷಕರು ಸಂರಚನಾವಾದದಂತಹ ಆದರ್ಶ ಮಾರ್ಗವನ್ನು ತರಗತಿಯಲ್ಲಿ ಅನುಷ್ಠಾನ ಗೊಳಿಸಬೇಕೆಂದು ಬಯಸುತ್ತದೆ. ಈ ನಿಟ್ಟಿನಲ್ಲಿ ಪ್ರಸಕ್ತ ಸಂದರ್ಭದ ಶಿಕ್ಷಕರು ಸಾಂಪ್ರದಾಯಿಕ ಮಾದರಿಗಳನ್ನು ಕೈಬಿಟ್ಟು ಸಂರಚನಾವಾದದ ತರಗತಿ ಪ್ರಕ್ರಿಯೆಗೆ ಅಣಿಯಾಗಬೇಕಾದ ಅಗತ್ಯವಿದೆ. ಕಲಿಕೆಯಲ್ಲಿ ಕಲಿಯುವವನನ್ನು ಪೂರ್ಣವಾಗಿ ಪರಿಗಣಿಸುವ ಇದು ಒಂದು ಆದರ್ಶ ಮತ್ತು ಪ್ರಜಾಸತ್ತಾತ್ಮಕ ತರಗತಿ ಆಚರಣೆಯೂ ಆಗಬಲ್ಲದು.

## ಪರಾಮರ್ಶನೆ


1. ಶೈಕ್ಷಣಿಕ ಮನೋವಿಜ್ಞಾನ– ಡಾ॥ ಎಚ್. ವಿ. ವಾಮದೇವಪ್ಪ
2. ಶೈಕ್ಷಣಿಕ ಮನೋವಿಜ್ಞಾನ (ಡಿ.ಎಡ್. ಮೊದಲ ವರ್ಷ) – ಡಿ.ಎಸ್.ಇ.ಆರ್.ಟಿ.
3. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು–2005
4. ಕಲಿಕೆ ಬಗ್ಗೆ ಅರ್ಥೈಸುವಿಕೆವಾದದ ದೃಷ್ಟಿಕೋನ (ಅಂತರ್ಜಾಲ ಲೇಖನ) – ಲೇ. ಎನ್. ಪ್ರಹ್ಲಾದ್
5. ಭಾರತೀಯ ಭಾಷಾ ಬೋಧನೆಯ ಬಗೆಗೆ ಎನ್ ಸಿ ಎಫ್ ಪೊಸಿಷನ್ ಪೇಪರ್
6. https://en.wikipedia.org/wiki/Constructivism_(philosophy_of_education)
7. http://edutechwiki.unige.ch/en/Constructivism



**ಸಿ. ಎಸ್. ಶಿವಕುಮಾರ್** : ಕನ್ನಡ ಸಾಹಿತ್ಯ ವಿಷಯದಲ್ಲಿ ಸ್ನಾತಕೋತ್ತರ ಪದವಿ ಮತ್ತು ಡಿ.ಎಡ್. ಶಿಕ್ಷಣ ಪಡೆದಿರುವ ಇವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಬಾಗಲಕೋಟೆ ಜಿಲ್ಲಾ ಸಂಸ್ಥೆ, ಇಳಕಲ್ ಬ್ಲಾಕ್‌ನಲ್ಲಿ ಕನ್ನಡ ಭಾಷಾ ಸಂಪನ್ಮೂಲ ವ್ಯಕ್ತಿಯಾಗಿ ಶಿಕ್ಷಕರ ವೃತ್ತಿಪರ ಬೆಳವಣಿಗೆಗಾಗಿ ಕೆಲಸ ಮಾಡುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ನಾಲ್ಕು ವರ್ಷಗಳ ಸೇವಾನುಭವವನ್ನು ಹೊಂದಿದ್ದಾರೆ.

*ಸಂಪರ್ಕ :* shivakumara.cs@azimpremjifoundation.org